ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಬಿ. ಶ್ಯಾಮಸುಂದರ

ಗಂಧರ್ವಸೇನಾ

ಪ್ರಕಟಣೆ

ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು

B. SHYAMSUNDAR, Eminent Parlimentarian Series, written by
GandharvaSena, Gulbarga

Published by Karnataka Legislature Library Committee, Vidhana Soudha, Bangalore-01.

First Edition: 2006 Copies: 2000
Printed & Designed by Government Press, Bangalore.
Page: 131 + 10 Price: 20-00 Rs.

ಬಿ. ಶ್ಯಾಮಸುಂದರ, ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ, ಲೇಖಕರು:
ಗಂಧರ್ವಸೇನಾ, ಗುಲಬರ್ಗಾ

ಪ್ರಕಾಶನ ಗ್ರಂಥಾಲಯ ಸಮಿತಿ, ಕರ್ನಾಟಕ ವಿಧಾನ ಮಂಡಲ, ವಿಧಾನಸೌಧ, ಬೆಂಗಳೂರು-560 001.

ಮುದ್ರಣ ಮತ್ತು ವಿನ್ಯಾಸ
ಸರ್ಕಾರಿ ಮುದ್ರಣಾಲಯ, ಬೆಂಗಳೂರು-560 001.
ಮೊದಲ ಮುದ್ರಣ: 2006 ಪ್ರತಿಗಳು: 2,000, ಪುಟ: 131 + 10 ಬೆಲೆ: 20/- ರೂ.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
## 2005-2006

*ಅಧ್ಯಕ್ಷರು*

ಸಚ್ಚಿದಾನಂದ ಲ.ಖೋತ
ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು
(ದಿನಾಂಕ 17.06.2006 ರಿಂದ)

*ಅಧ್ಯಕ್ಷರು*

ವಿ.ಆರ್. ಸುದರ್ಶನ್
ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು
(ದಿನಾಂಕ 17.06.2006 ರವರೆಗೆ)

*ಸದಸ್ಯರು*

ಕೃಷ್ಣ
ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

ವಿಶ್ವನಾಥ್ ಪಾಟೀಲ್ ಹೆಬ್ಬಾಳ್
ವಿಧಾನಸಭಾ ಸದಸ್ಯರು ಹಾಗೂ
ಉಪ ಸಮಿತಿಯ ಅಧ್ಯಕ್ಷರು

ಜಿ.ಎಸ್. ಗಡ್ಡದೇವರ ಮಠ
ವಿಧಾನಸಭಾ ಸದಸ್ಯರು
ಆರ್. ಧ್ರುವನಾರಾಯಣ್
ವಿಧಾನಸಭಾ ಸದಸ್ಯರು
ಕಳಕಪ್ಪ ಜಿ. ಬಂಡಿ
ವಿಧಾನಸಭಾ ಸದಸ್ಯರು
ಡಾ|| ವೀರಬಸವಂತರೆಡ್ಡಿ ಮುದ್ನಾಳ್
ವಿಧಾನಸಭಾ ಸದಸ್ಯರು
ಡಾ. ಚಂದ್ರಶೇಖರ ಬಿ. ಕಂಬಾರ
ವಿಧಾನ ಪರಿಷತ್ ಸದಸ್ಯರು
ಮುಖ್ಯಮಂತ್ರಿ ಚಂದ್ರು
ವಿಧಾನ ಪರಿಷತ್ ಸದಸ್ಯರು
(ದಿನಾಂಕ 24.07.2006 ರವರೆಗೆ)
ಉಮಾಶ್ರೀ
ವಿಧಾನ ಪರಿಷತ್ ಸದಸ್ಯರು
(ದಿನಾಂಕ 24.07.2006 ರವರೆಗೆ)
ಶ್ರೀನಾಥ್
ವಿಧಾನ ಪರಿಷತ್ ಸದಸ್ಯರು
(ದಿನಾಂಕ: 24.7.2006 ರಿಂದ)
ವೈ.ಎ. ನಾರಾಯಣಸ್ವಾಮಿ
ವಿಧಾನ ಪರಿಷತ್ ಸದಸ್ಯರು
(ದಿನಾಂಕ: 24.7.2006 ರಿಂದ)

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

---

### ಕರ್ನಾಟಕ ವಿಧಾನ ಮಂಡಲ

ಡಿ'ಸೋಜ ರಾಬಿನ್‌ಸನ್ ಪ್ರಧಾನ ಕಾರ್ಯದರ್ಶಿ

### ಕರ್ನಾಟಕ ವಿಧಾನಸಭೆ ಸಚಿವಾಲಯ

ಎಸ್.ವಿ. ಪಾಟೀಲ್ ಅಪರ ಕಾರ್ಯದರ್ಶಿ

ಕೆ.ಎನ್. ಪ್ರಭಾಕರರಾವ್ ಜಂಟಿ ಕಾರ್ಯದರ್ಶಿ

ಪಿ. ಓಂಪ್ರಕಾಶ್ ಸಭಾಧ್ಯಕ್ಷರ ಕಾರ್ಯದರ್ಶಿ

ಎಸ್. ಬಸವರಾಜ ಉಪ ಕಾರ್ಯದರ್ಶಿ

ಕೆ. ನೂರ್ ಮಹಮದ್ ಅಧೀನ ಕಾರ್ಯದರ್ಶಿ

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

ಜಯಶಂಕರಮೂರ್ತಿ ಕಾರ್ಯದರ್ಶಿ

ವಿ. ಶ್ರೀಶ್ ಅಪರ ಕಾರ್ಯದರ್ಶಿ

ಕೃಷ್ಣೇಗೌಡ ಸಭಾಪತಿಯವರ ಕಾರ್ಯದರ್ಶಿ

### ಸಂಪಾದಕರು

**ಎಲ್.ಎನ್. ಮುಕುಂದರಾಜ್**

ಕನ್ನಡ ಉಪನ್ಯಾಸಕರು

(ಅನ್ಯಕರ್ತವ್ಯದ ಮೇರೆಗೆ)

# ಮುನ್ನುಡಿ

20 ಜುಲೈ 2006

ರಾಷ್ಟ್ರದ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ|| ರಾಮಮನೋಹರ ಲೋಹಿಯಾ, ಡಾ|| ಬಿ.ಆರ್. ಅಂಬೇಡ್ಕರ್, ಡಾ|| ಶಾಂಪ್ರಸಾದ್ ಮುಖರ್ಜಿ, ಡಾ|| ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತರಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ|| ಲಂಕಾ ಸುಂದರಂ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

**ಗಂಧರ್ವಸೇನಾ** ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಬಿ. **ಶ್ಯಾಮಸುಂದರ** ಅವರ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

ಸಚ್ಚಿದಾನಂದ ಲ.ಹಿರೇಮಠ
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

ಕೃಷ್ಣ
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ಮಾತು

ಇಡೀ ದೇಶದಲ್ಲಿ ಸ್ವಾತಂತ್ರ್ಯದ ಹೋರಾಟ ತನ್ನ ಉತ್ತುಂಗದ ಸ್ಥಿತಿಯಲ್ಲಿರುವ ಕಾಲ ಆದಾಗಿತ್ತು. ಬ್ರಿಟಿಷರ ಕಪಿಮುಷ್ಠಿಯಿಂದ ಭಾರತವನ್ನು ಸ್ವತಂತ್ರಗೊಳಿಸುವ ವ್ಯಾಪಕವಾಗಿ ಬೆಳೆದಿತ್ತು. ಅದು ರಾಜಕೀಯ ಸ್ವಾತಂತ್ರ್ಯದ ಹೋರಾಟವಾಗಿತ್ತು. ಅದರ ಜೊತೆಗೆ ಸಾಮಾಜಿಕವಾಗಿ ನಿರ್ಲಕ್ಷಿಲ್ಪಟ್ಟಿರುವ, ಶೋಷಿತರ, ದಲಿತರ ಸಾಮಾಜಿಕ ಸ್ವಾತಂತ್ರ್ಯದ ಮಜಲಿಗಾಗಿ ಡಾ. ಬಾಬಾಸಾಹೇಬ ಅಂಬೇಡ್ಕರ ಅವರ ಚಳುವಳಿಯೂ ನಡೆದಿತ್ತು.

ಡಾ. ಬಾಬಾಸಾಹೇಬ ಅಂಬೇಡ್ಕರ ಅವರಿಂದ ಪ್ರೇರಿತರಾಗಿ ದಕ್ಷಿಣ ಭಾರತದಲ್ಲಿ ದಲಿತ ಚಳುವಳಿಯನ್ನು ಮುಂದಿನ ಪೀಳಿಗೆಗೆ ಹಸ್ತಾಂತರಿಸುವ ಮಹಾನ ಕಾರ್ಯ ಮಾಡಿದವರು ಬಿ. ಶ್ಯಾಮಸಂದರ ಸಾಹೇಬರು. ಆ ಕಾಲದಲ್ಲಿ ಲಕ್ಷಾಂತರ ಜನರನ್ನು ಸ್ಪಂದಿಸಿರುವ ಚೈತನ್ಯ ಶಕ್ತಿ ಬಿ. ಶ್ಯಾಮಸುಂದರ ಸಾಹೇಬರು ಆಗಿದ್ದರು.

ಭೀಮಸೇನಾ ಎಂಬ ಸಂಘಟನೆ ಸ್ಥಾಪಿಸಿ ದಲಿತ ಚಳುವಳಿಗೆ ಒಂದು ಹೊಸ ಆಯಾಮ ನೀಡಿರುವರು. ಹೈದರಾಬಾದಿನ ನಿಜಾಮ ಸರಕಾರದಲ್ಲಿ ಹಾಗೂ ನಂತರದಲ್ಲಿ ಮೈಸೂರ ವಿಧಾನ ಸಭೆಯಲ್ಲಿ ದಲಿತರ ಸಶಕ್ತ ಧ್ವನಿಯಾಗಿ ನಾಡಿನ ಸೇವೆ ಮಾಡಿರುವ ಈ ಮಹಾನ ವ್ಯಕ್ತಿತ್ವ ಕುರಿತು ಪುಸ್ತಕ ರಚಿಸುವ ಜವಾಬ್ದಾರಿ ನನಗೆ ಕರ್ನಾಟಕ ಸರಕಾರ ನೀಡಿರುವುದಕ್ಕೆ ನಾನು ಕೃತಜ್ಞನಾಗಿದ್ದೇನೆ.

ಈ ಪುಸ್ತಕ ರಚನೆಯ ಸಂದರ್ಭದಲ್ಲಿ ವಿವಿಧ ಹಂತಗಳಲ್ಲಿ ಸಹಕರಿಸಿರುವ ಗೆಳೆಯರಾದ ಕಾಜಿ ಅರಷದ ಅಲಿ, ಎಂ.ಎಲ್.ಸಿ.ಗಳು, ಹಿಂದಿನ ಸಭಾಪತಿಗಳಾದ ವಿ.ಆರ್. ಸುದರ್ಶನ್, ಈಗಿನ ಸಚ್ಚಿದಾನಂದ ಲ.ಖೋತ ಹಾಗೂ ಉಪ ಸಮಿತಿ ಅಧ್ಯಕ್ಷರಾದ ವಿಶ್ವನಾಥಪಾಟೀಲ ಹೆಬ್ಬಾಳ ಮತ್ತಿತರ ಸಮಿತಿಯ ಎಲ್ಲ ಗೌರವಾನ್ವಿತ ಸದಸ್ಯರಿಗೆ ಕೃತಜ್ಞತೆಗಳು. ವಾರ್ತಾಧಿಕಾರಿ ಮಿತ್ರರಾದ ಬಸವರಾಜ ಪಾರಾ ಅವರಿಗೆ, ಪತ್ರಕರ್ತ ಮಿತ್ರರಾದ ಶಿವರಾಜ ದೊಡ್ಡಮನಿ ಹಾಗೂ ಡಾ. ಓಂಕಾರ ಕಾಕಡೆ ಅವರನ್ನು, ಸಾಮಾಜಿಕ ಕಾರ್ಯಕರ್ತರಾದ ಎಚ್.ಎಸ್. ಶ್ರೇಯಸ್ಕರ್ ಪ್ರಕಾಶ ಬಲಾಂಡೆ, ಕಂಟೆಪ್ಪಾ ಗುಮ್ಮೆ, ನಾಗಪ್ಪ ಶಿಬರಗಟ್ಟಿ ಮುಂತಾದ ಅನೇಕರನ್ನು ನಾನು ಕೃಜ್ಞನಾಗಿದ್ದೇನೆ. ವಿಶೇಷವಾಗಿ ಈ ಪುಸ್ತಕ ಮಾಲಿಕೆಯ ಸಂಪಾದಕರಾದ ಎಲ್.ಎನ್. ಮುಕುಂದರಾಜ್ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸಬೇಕಾಗಿದೆ.

ಬಿ. ಶ್ಯಾಮಸುಂದರ ಅವರು ಒಂದು ಸಲ ಮೈಸೂರು ವಿಧಾನ ಸಭೆಯಲ್ಲಿ ಚರ್ಚೆಯಲ್ಲಿ ಭಾಗವಹಿಸುತ್ತಾ ಈ ಕೆಳಗಿನಂತೆ ಹೇಳಿದರು. "ನಾವು ಇಂದಿಲ್ಲಿ ಏನು ಚರ್ಚೆ ಮಾಡುತ್ತಿದ್ದೇವೋ ಅದು ಇತಿಹಾಸವಾಗುವುದು ಎಂಬ ಎಚ್ಚರವಿರಲಿ. ನಾಳೆ ಒಂದು ದಿನ ಇಂದಿನ ನಡವಳಿಕೆಗಳು ಯಾರಾದರೂ ದಾಖಲಿಸಬಹುದು. ಪುಸ್ತಕ ಬರೆಯಬಹುದು. ಮುಂದಿನ ಪೀಳಿಗೆಗೆ ತಲುಪಿಸಬಹುದು. ಅದನ್ನು ಓದಿ ಮುಂದಿನ ಪೀಳಿಗೆ ನಮ್ಮ ಬಗ್ಗೆ ಒಳ್ಳೆ ಅಭಿಪ್ರಾಯಕ್ಕೆ ಬರಬೇಕು ಎಂಬ ಎಚ್ಚರಿಕೆಯಿಂದ ನಾವಿಂದು ನಡೆದುಕೊಳ್ಳಬೇಕಾಗಿದೆ."

ಇಂತಹ ದೂರದೃಷ್ಟಿಯುಳ್ಳ ಮಹಾ ಚೇತನ 40 ವರ್ಷಗಳ ಹಿಂದೆಯೇ ನುಡಿದಿರುವ ಮಾತು ಇಂದು ಸತ್ಯವಾಗುತ್ತಿದೆ. ಅಂದಿನ ಕಲಾಪಗಳ ಚರ್ಚೆ ಪುಸ್ತಕ ರೂಪದಲ್ಲಿ ದಾಖಲಿಸುವ ಐತಿಹಾಸಿಕ ಕಾರ್ಯದ ಹೊಣೆಗಾರಿಕೆ ನನಗೆ ದೊಕಿರುವ ಕಾರಣ ನಾನು ತುಂಬಾ ಗೌರವಶಾಲಿ ಹಾಗೂ ಭಾಗ್ಯಶಾಲಿಯಾಗಿದ್ದೇನೆ.

ಈ ಪುಸ್ತಕ ರಚನೆಯ ಕಾಲಕ್ಕೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಾಯ ಸಹಕಾರ ನೀಡಿರುವ ಎಲ್ಲರಿಗೂ, ಕರ್ನಾಟಕ ಸರಕಾರಕ್ಕೆ, ವಿಧಾನ ಸಭೆಯ ಉಪಸಮಿತಿಯ ಎಲ್ಲಾ ಸದಸ್ಯರಿಗೂ ನಾನು ಕೃತಜ್ಞನಾಗಿದ್ದೇನೆ. ಡಿ.ಟಿ.ಪಿ. ಮಾಡಿದ ಸರ್ಕಾರಿ ಮುದ್ರಣಾಲಯದ ಬಿ.ಎಂ. ರವಿಕುಮಾರ್ ಹಾಗೂ ಎಲ್ಲ ಸಿಬ್ಬಂದಿಗೂ ಕೃತಜ್ಞತೆಗಳು.

ದಿನಾಂಕ: 24.7.2006 — ಗಂಧರ್ವ ಸೇನಾ

# ಪರಿವಿಡಿ

## ಭಾಗ-3
ಗಣ್ಯರ ಅನಿಸಿಕೆಗಳು



## ಭಾಗ-4

# ಬಿ. ಶ್ಯಾಮಸುಂದರ್ ಅವರ ಸಂಘರ್ಷಮಯ ಜೀವನ

ಭಾರತ ದೇಶದ ಸಾಮಾಜಿಕ ಇತಿಹಾಸ ಗಮನಿಸಿದರೆ ವರ್ಣ ಹಾಗೂ ವರ್ಗ ಎರಡೂ ಒಂದರೊಳ್ಳೊಂದು ಬೆರೆತಿರುವುದನ್ನು ನೋಡಬಹುದಾಗಿದೆ. ಸಾಮಾಜಿಕ ಹಾಗೂ ಆರ್ಥಿಕ ರೀತ್ಯಾ ಶೋಷಣೆಗೆ ಅನುಕೂಲವಾಗುವ ರೀತಿಯಲ್ಲಿ ಭಾರತೀಯ ಸಮಾಜ ಬೆಳೆದು ಬಂದದ್ದನ್ನು ನೋಡಬಹುದಾಗಿದೆ. ಈ ಪರಿಸ್ಥಿತಿಯಲ್ಲು ದಲಿತರು, ಹಿಂದುಳಿದವರು ಹಾಗೂ ಮಹಿಳೆಯರನ್ನು ಎಲ್ಲಾ ಕಾಲದಲ್ಲು ಉಪಯೋಗದ ವಸ್ತುವಿನಂತೆ ಮೇಲ್ವರ್ಗ ಮೇಲ್ಜಾತಿ ಸವರ್ಣೀಯರು ಬಳಸುತ್ತ ಬಂದವರೇ ಎನ್ನಬಹುದು.

ಇಂತಹ ಕ್ರೂರವಾದ, ಅಮಾನವೀಯ ಹಾಗೂ ಅವೈಜ್ಞಾನಿಕವಾದ ವ್ಯವಸ್ಥೆಗೆ ಪ್ರತಿಭಟಿಸಿ ಹೋರಾಡಿರುವ ಅನೇಕ ಮಹಾಪುರುಷರು ಆಗಿ ಹೋಗಿರುವರು ನಮ್ಮ ಚರಿತ್ರೆಯಲ್ಲಿ ದಾಖಲಾಗಿದೆ.

ಭಾರತ ದೇಶದ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿಯು ಒಂದು ಕಡೆ ಬ್ರಿಟಿಷರ ಆಳ್ವಿಕೆಯಿಂದ ದೇಶವನ್ನು ಸ್ವಾತಂತ್ರ್ಯಗೊಳಿಸಬೇಕೆಂಬ ಹೋರಾಟ ನಡೆದಿತ್ತು. ಅದರ ಜೊತೆಗೆ ಸಾಮಾಜಿಕ ಸ್ವಾತಂತ್ರ್ಯದ ಹೋರಾಟವೂ ನಡೆಯಿತು ಎಂಬುದೂ ಗಮನಾರ್ಹ. ಈ ಹೋರಾಟದ ಪ್ರಮುಖ ಹೆಸರು ಡಾ. ಬಿ.ಆರ್. ಅಂಬೇಡ್ಕರ್.

ಸ್ವಾತಂತ್ರ್ಯ ಪೂರ್ವದಿಂದ ಸ್ವಾತಂತ್ರ್ಯ ನಂತರದವರೆಗೆ ಈ ದೇಶದ ದೀನ ದಲಿತರಿಗೆ, ಅಸ್ಪೃಶ್ಯರಿಗೆ ಸಾಮಾಜಿಕ ನ್ಯಾಯ ಕೊಡಿಸುವ ಹೋರಾಟ ನಡೆಯಿತು. ಈ ಹೋರಾಟದ ಮುಂದಿನ ಮಹತ್ವದ ಮಜಲು ದಕ್ಷಿಣ ಭಾರತದಲ್ಲಿ ಬಿ. ಶ್ಯಾಮಸುಂದರ್ ಅವರಿಂದ ಪ್ರಭಾವಶಾಲಿಯಾಗಿ ಪೂರ್ಣಗೊಂಡಿತು. ಹೋರಾಟ ಮನೋಭಾವದ ಕಿಚ್ಚನ್ನು ಯಶಸ್ವಿಯಾಗಿ ಈ ಭಾಗದ ದಲಿತ, ಶೋಷಿತರಲ್ಲಿ ಹೆಚ್ಚಿರುವ ದಿಮಂತ ನಾಯಕ ಎಂದರೆ, ಬಿ. ಶ್ಯಾಮಸುಂದರ ಅವರು.

ಮೂಲತ: ಮಹಾರಾಷ್ಟ್ರದ ಔರಾಂಗಬಾದ್‌ನಲ್ಲಿ ತಂದೆ ಬದುಲಾ ಮಾಣಿಕ್ಯಂ, ತಾಯಿ ಸುಧಾಬಾಯಿ ಎಂಬ ಅಸ್ಪೃಶ್ಯ ವೆನಿಸಿದ 'ಮಾಲಾ' ಜಾತಿಗೆ ಸೇರಿದ ದಂಪತಿಗಳ ಉದರದಿಂದ ದಿನಾಂಕ:21.12.1908ರಂದು ಶ್ಯಾಮಸುಂದರ ಅವರು ಜನಿಸಿದರು.

ತಂದೆ ರೈಲ್ವೆ ಇಲಾಖೆಯಲ್ಲಿ ನೌಕರಿಯಲ್ಲಿದ್ದರು. ಶ್ಯಾಮಸುಂದರ್ ಅವರು ಪ್ರಾಥಮಿಕ ಶಿಕ್ಷಣ 1913ರಲ್ಲಿ ಕ್ರೈಸ್ತ ಮಿಶನರಿಯ ಸೆವೆನ್ ಫ್ಲವರ್ಸ್ ಶಾಲೆಯಲ್ಲಿ ಆಯಿತು. ಆದರೆ ತಂದೆಯವರ ನೌಕರಿ 1915ರಲ್ಲಿ ಹೈದರಾಬಾದ್‌ಗೆ ವರ್ಗವಾದಾಗ ಅವರು ತಂದೆಯವರ ಜೊತೆ ಹೈದರಾಬಾದಿಗೆ ಬರಬೇಕಾಯಿತು.

ಅಲ್ಲಿ ಅವರು ಮಾಧ್ಯಮಿಕ ಹಾಗೂ ಉನ್ನತ ಶಿಕ್ಷಣ ಪಡೆದರು. ಉಸ್ಮಾನಿಯ ವಿಶ್ವವಿದ್ಯಾಲಯದ ರಾಜ್ಯಶಾಸ್ತ್ರ ಹಾಗೂ ಅರ್ಥಶಾಸ್ತ್ರ ಪದವಿ ಪಡೆದರು. ನಂತರ ಕಾನೂನಿನ ಪದವಿ ಕೂಡ ಪೂರ್ಣಗೊಳಿಸಿದರು. ಮುಂಬಾಯಿಯಲ್ಲಿ ಪೇಂಟಿಂಗ್ ಹಾಗೂ ಡ್ರಾಯಿಂಗ್‌ನಲ್ಲಿ ಡಿಪ್ಲೋಮಾ ಕೂಡಾ ಮಾಡಿದ್ದರು.

ಕಾಲೇಜ್ ಜೀವನದಲ್ಲಿಯೇ ಅವರು ರಾಜಕೀಯ ಹಾಗೂ ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. 1930ರಲ್ಲಿ ಹೈದರಾಬಾದ್ ವಿದ್ಯಾರ್ಥಿ ಸಂಘಟನೆಯ ಅಧ್ಯಕ್ಷರಾಗಿ ಆಯ್ಕೆ ಆಗಿದರು.

1931 ರಿಂದ 34ರ ತನಕ ಯಂಗ್ ಮೇನ್ಸ್ ಅಸೋಸಿಯೇಷನ್ ಆಫ್ ಹೈದರಾಬಾದ್ ಎಂಬ ಸಂಘಟನೆಯ ಸಂಚಾಲಕರಾಗಿ ಸೇವೆ ಸಲ್ಲಿಸಿದರು. ಈ ಸಂಘಟನೆಯ ಮೂಲಕ ಬಿ. ಶ್ಯಾಮಸುಂದರ್ ಅವರು ಹಿಂದುಳಿದ ವರ್ಗದ ಯುವಕರನ್ನು ಸಂಘಟಿಸಿದರು. ಅಸ್ಪೃಶ್ಯತಾ ವಿರುದ್ಧ ಹೋರಾಟ ನಡೆಸುವುದೇ ಈ ಸಂಘಟನೆಯ ಉದ್ದೇಶವಾಗಿತ್ತು. 1932ರಲ್ಲಿ ಅವರು 'ಸ್ವದೇಶಿ ಲೀಗ್' ಎಂಬ ಸಂಸ್ಥೆಯ ಸದಸ್ಯರಾಗಿ ಆಯ್ಕೆ ಆದರು. ಇದೇ ವರ್ಷ ಲಿಟರರಿ ಸೋಸಾಯಿಟಿ ಆಫ್ ಹೈದರಾಬಾದ್ ಎಂಬ ಸಾಹಿತ್ಯಕ ಸಂಘಟನೆಯ ಅಧ್ಯಕ್ಷರಾಗಿಯೂ ಬಿ. ಶ್ಯಾಮಸುಂದರ್ ಆಯ್ಕೆ ಆಗಿದ್ದರು. ಇದೇ ವರ್ಷ ಡಾ. ಅಂಬೇಡ್ಕರ್ ಅವರು ಲಂಡನ್‌ನಲ್ಲಿ ದುಂಡು ಮೇಜಿನ ಸಮ್ಮೇಳನದಲ್ಲಿ ಭಾಗವಹಿಸಿದರು. ಆ ಸಂದರ್ಭದಲ್ಲಿ ಅವರ ನಿಲುವಿನ ಬೆಂಬಲ ಶ್ಯಾಮಸುಂದರ್ ಯುವಕರನ್ನು ಹುರಿದುಂಬಿಸಿದರು. "ಗ್ರೇಜುಏಟ್ ಅಸೋಶಿಯೇಷನ್" ಎಂಬ ಈ ಸಂಘಟನೆಯ ಆರ್ಥಿಕ ಸಮಿತಿಯ ಸದಸ್ಯರಾಗಿ ಆಯ್ಕೆಯಾಗಿ ಸೇವೆ ಸಲ್ಲಿಸಿದರು. ಈ ಅವಧಿಯಲ್ಲಿ ಶ್ಯಾಮಸುಂದರ್ ಅವರ ತಂದೆಯವರು ನಿಧನರಾದರು. ಇದೇ ವರ್ಷ ಸೋದರಿ ಮಾಣಿಕಬಾಯಿ ಅವರ ವಿವಾಹವಾಯಿತು. ಇದರಿಂದ ಏಕಾಂಗಿಯಾದ ಅವರು ಕೆಲ ಕಾಲ ದೂದಧರಿ ಮಹಾರಾಜ ಅವರ ಆಶ್ರಮದಲ್ಲಿ ತಂಗಿದರು. ಸಮಾಜ ಸೇವೆಗಾಗಿ ಬ್ರಹ್ಮಚಾರಿಯಾಗಿ ಇರುವ ಪ್ರೇರಣೆ ಅವರಿಗೆ ಇದೇ ಆಶ್ರಮದಲ್ಲಿ ಸಿಕ್ಕಿತು. ಇಲ್ಲಿ ಮೊದಲೇ ಅನೇಕ ಬ್ರಹ್ಮಚಾರಿಗಳು ಸಮಾಜ ಸೇವೆಗಾಗಿ ಬದ್ಧರಾಗುತ್ತಿದ್ದರು. 1934ರಲ್ಲಿ "ಸೋಸಾಯಿಟಿ ಆಫ್ ಯುನಿಯನ್ ಎಂಡ್ ಪ್ರೋಗ್ರೇಸ್" ಎಂಬ ಸಂಸ್ಥೆಯ ಸದಸ್ಯತ್ವವನ್ನು ಬಿ. ಶ್ಯಾಮಸುಂದರ್ ಅವರು ಪಡೆದರು.

1935ರ ವೇಳೆಗೆ ದಲಿತರು-ಅಸ್ಪೃಶ್ಯರು ಸಾಮೂಹಿಕವಾಗಿ ಅನ್ಯ ಧರ್ಮಕ್ಕೆ ಪರಿವರ್ತನೆ ಹೊಂದುವ ಕಾಲವಾಗಿತ್ತು. ಈ ಸಂದರ್ಭದಲ್ಲಿ ಅಸ್ಪೃಶ್ಯರು, ದಲಿತರು ಅನ್ಯ ಧರ್ಮ ಸ್ವೀಕರಿಸಬಾರದು ಎಂದು ಬಿ. ಶ್ಯಾಮಸುಂದರ್ ಹೇಳಿದರು. ತನ್ನ ಅಭಿಪ್ರಾಯದ ಪರವಾಗಿ ಪ್ರಚಾರ ಮಾಡಲು ಅವರು ಆಂಧ್ರಪ್ರದೇಶಲ್ಲಿ ವ್ಯಾಪಕವಾಗಿ ಪ್ರವಾಸ ಮಾಡಿದರು. ಮಹಾರಾಷ್ಟ್ರದಲ್ಲೂ ಅನೇಕ ಜಿಲ್ಲೆಗಳಲ್ಲಿ ಹಾಗೂ ಅಂದಿನ ಮೈಸೂರು ಸಂಸ್ಥಾನದಲ್ಲಿ ಕೂಡಾ ಅನೇಕ ಕಡೆ ಪ್ರವಾಸ ಮಾಡಿ ತನ್ನ ವಿಚಾರಗಳನ್ನು ತಿಳಿಸಿದುಂಟು. ಬಿ. ಶ್ಯಾಮಸುಂದರ್ ಅವರು ದೀನ, ದಲಿತ, ಶೋಷಿತರ ಬಗ್ಗೆ ಅಪಾರ ಕಳಕಳಿ ಹೊಂದಿದ್ದರು.

1936ರಲ್ಲಿ ಪುಣೆಯಲ್ಲಿ ಪಂಡಿತ್ ಮದನ್‌ಮೋಹನ್ ಮಾಲವೀಯಜೀ ಅವರ ಅಧ್ಯಕ್ಷತೆಯಲ್ಲಿ ನಡೆದ ಹಿಂದು ಮಹಾಸಭೆಯ ವಾರ್ಷಿಕ ಅಧಿವೇಶನದಲ್ಲಿ ಭಾಗವಹಿದರು. ಹಾಗೂ ತನ್ನ ದಲಿತಪರ ನಿಲುವನ್ನು ಸಮರ್ಥವಾಗಿ ಮಂಡಿಸಿದರು. ಅಲ್ಲದೇ ಹಿಂದು ಧರ್ಮದ ನ್ಯೂನತೆಗಳಿಗೆ ಎತ್ತಿ ತೋರಿಸಿದರು. ಕಾಲೇಜ್ ಶಿಕ್ಷಣದ ವೇಳೆಯಲ್ಲಿಯೇ ಬಿ. ಶ್ಯಾಮಸುಂದರ್ ಹೈದರಾಬಾದ್ ಸಂಸ್ಥಾನದಲ್ಲಿ ಖ್ಯಾತಿ ಪಡೆದಿದ್ದರು.

1939ರಲ್ಲಿ ಗ್ರೇಜುವೇಟ್ ಕಾನ್ಫರೆನ್ಸ್‌ವೊಂದು ಶ್ರೀಮತಿ ಸರೋಜಿನಿ ನಾಯುಡು ಅವರ ಅಧ್ಯಕ್ಷತೆಯಲ್ಲಿ ನಡೆದಿತ್ತು. ಬಿ. ಶ್ಯಾಮಸುಂದರ್ ಅವರು ಸದರಿ ಕಾನ್ಫರೆನ್ಸ್ ಕಾರ್ಯದರ್ಶಿಯಾಗಿ ಆಯ್ಕೆಯಾಗಿ ಸೇವೆ ಸಲ್ಲಿಸಿದ್ದರು.

1942ರಲ್ಲಿ "ಭಾರತೀಯ ಡಿಪ್ರೆಸ್ಸ್‌ಡ್ ಕ್ಲಾಸ್ಸಸ್ ಕಾನ್ಫರೆನ್ಸ್" ಮಹಾರಾಷ್ಟ್ರದ ನಾಂದೇಡನಲ್ಲಿ ನಡೆದಿತ್ತು. ಆ ಸಮಾವೇಶದ ಅಧ್ಯಕ್ಷತೆಯನ್ನು ಬಿ. ಶ್ಯಾಮಸುಂದರ್ ವಹಿಸಿದ್ದರು. 64 ಪುಟಗಳ ತನ್ನ ವಿದ್ವತ್ಪೂರ್ಣ ಭಾಷಣ ಮಾಡಿದರು.

1945ರಲ್ಲಿ ಭಾರತೀಯ ಡಿಪ್ರೆಸ್ಸ್‌ಡ್ ಕ್ಲಾಸ್ಸಸ್ ಅಸೋಸಿಯೇಷನಿನ ಅಧ್ಯಕ್ಷರಾದರು. 1946ರಲ್ಲಿ ಹಿಂದುಳಿದ ವರ್ಗದ ಜನರ ಐಕ್ಯತೆಗಾಗಿ "ಇಂಡಿಪೆಂಡೆಂಟ್ ಶೆಡ್ಯೂಲ್ಡ್ ಕಾಸ್ಟ್ಸ್ ಫೆಡರೇಶನ್" ಎಂಬ ಸಂಘಟನೆ ಆರಂಭಿಸಿದರು.

1947ರಲ್ಲಿ ಹೈದರಾಬಾದ ಶಾಸನ ಸಭೆಯ ಸದಸ್ಯರಾಗಿ ಆಯ್ಕೆಯಾದರು. 1948ರಲ್ಲಿ ಅಲ್ಲಿನ ಉಪಸಭಾಪತಿಗಳಾಗಿ ಆಯ್ಕೆಯಾದರು. ಇದೇ ವೇಳೆಗೆ ಹೈದರಾಬಾದ್ ಸಂಸ್ಥಾನದಲ್ಲಿನ ದಲಿತರ ಶಿಕ್ಷಣಕ್ಕಾಗಿ 1 ಕೋಟಿ ರೂಪಾಯಿಗಳ ನಿಧಿ ಸ್ಥಾಪಿಸಿದರು.

1948ರಲ್ಲಿ ಪ್ಯಾರಿಸ್‌ನಲ್ಲಿ ಏರ್ಪಡಿಸಲಾಗಿರುವ "ಯುನಾಯಿಟೆಡ್ ನೇಶನ್ಸ್ ಸೆಕ್ಯೂರಿಟಿ ಕೌನ್ಸಿಲ್‌ನಲ್ಲಿ" ಹೈದರಾಬಾದ್ ಸಂಸ್ಥಾನದ ಪ್ರತಿನಿಧಿ ಮಂಡಳದಲ್ಲಿ ಸದಸ್ಯರಾಗಿ ಭಾಗವಹಿಸಿದರು. ಈ ನಡುವೆ ಹೈದರಾಬಾದಿನ ನಿಜಾಮ್ ಭಾರತ ಗಣರಾಜ್ಯಕ್ಕೆ ಶರಣಾಗಿದ್ದನು. 1950ರಲ್ಲಿ ಬಿ. ಶ್ಯಾಮಸುಂದರ್ ಅವರು ವಾಪಸ ಭಾರತಕ್ಕೆ ಬಂದಾಗ ಭಾರತ ಸರಕಾರವು ಅವರನ್ನು ಪುಣೆಯಲ್ಲಿ ಬಂಧಿಸಿತು. 1951ರಲ್ಲಿ ಬಂಧನದಿಂದ ಮುಕ್ತರಾದರು. ಮತ್ತೆ ದಲಿತ ಹಿಂದುಳಿದ ಅಲ್ಪಸಂಖ್ಯಾತರ ಸಂಘಟನೆ ಆರಂಭಿಸಿದರು. 1952ರಲ್ಲಿ ಹೈದರಾಬಾದ್‌ನಿಂದ ಸಾರ್ವತ್ರಿಕ ಚುನಾವಣೆಯಲ್ಲಿ ಸ್ಪರ್ಧಿಸಿದರು. 1957ರಲ್ಲಿ ಮೈಸೂರು ರಾಜ್ಯದ ಭಾಲ್ಕಿ ಜಂಟಿ ಮತಕ್ಷೇತ್ರದಿಂದ ವಿಧಾನ ಸಭೆ ಚುನಾವಣೆಗೆ ಸ್ಪರ್ಧಿಸಿ ಜಯಶಾಲಿಯಾದರು. 1962ರ ತನಕ ವಿಧಾನಸಭಾ ಸದಸ್ಯರಾಗಿ ಅಪೂರ್ವ ಸೇವೆ ಸಲ್ಲಿಸಿದರು. 1968ರಲ್ಲಿ "ಭಾರತೀಯ ಭೀಮ ಸೇನಾ" ಎಂಬ ಸಂಘಟನೆ ಸ್ಥಾಪಿಸಿದರು. ಸುಮಾರು 2 ಲಕ್ಷ ಜನ ಈ ಸಂಘಟನೆಯ ಸದಸ್ಯರು ದೇಶಾದ್ಯಂತ ಇದ್ದರು. ಮೂಢನಂಬಿಕೆಗಳ ವಿರುದ್ಧ ದಲಿತರಲ್ಲಿ ಜಾಗೃತಿ ಮೂಡಿಸುವ ಅನೇಕ ಕಾರ್ಯಕ್ರಮಗಳನ್ನು ಅವರು ನಡೆಸಿದರು. ಅನ್ಯಾಯದ ವಿರುದ್ಧ ತುಂಬಾ ಶಕ್ತಿಯುತವಾಗಿ ಪ್ರತಿಭಟಿಸುವ ಅವರ ಶೈಲಿ ತುಂಬಾ ಜನಪ್ರಿಯವಾಗಿತ್ತು. ತನ್ನ ಕಿಚ್ಚಿನ ಭಾಷಣಗಳಿಂದಾಗಿ ಅವರು ಅನೇಕ ಸಲ ಜೈಲುವಾಸ ಅನುಭವಿಸಬೇಕಾಯಿತು.

19.5.1975 ರಂದು ಹೈದರಾಬಾದ್‌ನಲ್ಲಿ ಸೋದರಿಯ ನಿವಾಸದಲ್ಲಿ ಅವರು ನಿಧನರಾದರು.

# ಬಿ. ಶ್ಯಾಮಸುಂದರ ಅವರು ಬರೆದ ಪುಸ್ತಕಗಳು

1. ದೇ ಬರ್ನ್ (ಇಂಗ್ಲಿಷ)
2. ಭೀಮ ಸೇನಾ - ಅವರ್ ಪಾಸ್ಟ್ ಎಂಡ್ ಪ್ರಜೆಂಟ್ (ಇಂಗ್ಲಿಷ)
3. ಭೀಮ ಸೇನಾ ಕ್ಯಾ ಚಾಹತಿ ಹೈ (ಹಿಂದಿ ಮತ್ತು ಉರ್ದು)
4. ದಿ ಫೋರ್ ಇಮಿಜೆಟ್ ನೀಡ್ಸ್ ಆಫ್ ಟ್ವಲ್ವ ಕ್ರೋರ್ಸ್ (ಇಂಗ್ಲಿಷ)
5. ಫೆಡರೇಷನ್ ಇಜ್ ಮಸ್ಟ್ ಫಾರ್ ಇಂಡಿಯನ್ ಮೈನಾರಿಟಿಜ್ (ಇಂಗ್ಲಿಷ)
6. ಡೆಂಜರ್ ಅಹೆಡ್ ಫಾರ್ ಮೈನಾರಿಟಿಜ್, ಲೆಟ್ ಅಸ್ ಯುನೈಟ್ ಎಂಡ್ ಫೇಸ್ ದೆಮ್ (ಇಂಗ್ಲಿಷ)
7. ಪ್ರಾಬ್ಲೆಮ್ ಆಫ್ ಇಂಡಿಯನ್ ಮೈನಾರಿಟಿಸ್ (ಇಂಗ್ಲಿಷ)
8. ನೆಶನಲ್ ಇಂಟಿಗ್ರೇಶನ್ ಎಂಡ್ ಪ್ರಾಬ್ಲೆಮ್ ಆಫ್ ಮೈನಾರಿಟಿಸ್ (ಇಂಗ್ಲಿಷ)
9. ಟುಡೇಜ್ ಮುಸ್ಲಿಮ್ಸ್ ವಿಲ್ ಬಿ ಟುಮಾರೋಜ್ ಹರಿಜನ್ಸ್ (ಇಂಗ್ಲಿಷ, ಹಿಂದಿ, ಉರ್ದು)
10. ಅಖಿಲಿಯತೋಂಕಾ ನಾರಾ ಹಿಂದೋಸ್ತಾನ ಹಮಾರಾ (ಇಂಗ್ಲಿಷ್, ಹಿಂದಿ, ಉರ್ದು)
11. ಹ್ಯೂಮನ್ ರೈಟ್ಸ್ ಡಿಕ್ಲೇರಶನ್ ಮಸ್ಟ್ ಬೀ ಆನರಡ್ ಇನ್ ಇಂಡಿಯಾ (ಇಂಗ್ಲಿಷ)
12. ವ್ಹಾಯಿ ದಿ ಕಾನಸ್ಟಿಶನ್ ನೀಡ್ಸ್ ಶೆಕೆಂಡ್ ಗುಡ್ ಲುಕ್ (ಇಂಗ್ಲಿಷ)
13. ಪ್ರಾಬ್ಲಮ್ಸ್ ಆಫ್ ಶೆಡುಲ್ಡ್ ಕಾಸ್ಟ್ಸ್ (ಇಂಗ್ಲಿಷ)
14. ದೀಕ್ಷಾ (ಹಿಂದಿ, ಉರ್ದು)
15. ಎಜುಕೇಶನಲ್ ಕಾನಫರನ್ಸ್ (ಉರ್ದು)
16. ಮೆಹರಾಬ್ ದ್ ಇಂಟರವ್ಯೂ (ಉರ್ದು)
17. ದ್ ಸ್ಪಿಚ್ (ಆಡಿಯೋ ಕ್ಯಾಸೆಟ್)
18. ಭೂ ದೇವತಾವೋಂ ಕಾ ಮೆನಿಫೆಸ್ಟೋ (ಹಿಂದಿ)

# ಜನನಾಯಕ ಪಟ್ಟಿಯಿಂದ ವಂಚಿತ ಶ್ಯಾಮಸುಂದರ

ಕರ್ನಾಟಕ ಹೈದ್ರಾಬಾದ ಕರ್ನಾಟಕ, ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರದ ಕೆಲವು ಭಾಗಗಳಲ್ಲಿ ಸಾಮಾಜಿಕ ಅಸಮಾನತೆ ಹೋಗಲಾಡಿಸುವಲ್ಲಿ ಮತ್ತು ದಲಿತರ ಉದ್ಧಾರಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟ ಬಿ. ಶ್ಯಾಮಸುಂದರ್ ಅವರ ಹೆಸರು ಅಜರಾಮರವಾಗಿರಬೇಕಿತ್ತು. ಡಾ|| ಅಂಬೇಡ್ಕರ್ ಕಾಲದಲ್ಲಿ ಮತ್ತು ಆ ನಂತರವೂ, ದಲಿತರ ಉದ್ಧಾರಕ್ಕಾಗಿ ಈ ಭಾಗದಲ್ಲಿ ಅನೇಕ ಕ್ರಾಂತಿಕಾರಕ ಹೋರಾಟ ಮತ್ತು ಚಿಂತನೆ ಮಾಡಿದವರು. ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಮತ್ತು ಸಂವಿಧಾನಾತ್ಮಕವಾಗಿ ಕೆಳ ವರ್ಗದವರನ್ನು ಮೇಲೆತ್ತಲು ಅವಿರತವಾಗಿ ದುಡಿದಿದ್ದಾರೆ. ಜನ ಸಂಘಟನೆ, ಹೋರಾಟ, ಸಾಹಿತ್ಯ ರಚನೆ, ಕಾನೂನು ಸಮರ ಇತ್ಯಾದಿಗಳ ಮೂಲಕ ಈ ಭಾಗದ ದಲಿತರನ್ನು ಉದ್ಧರಿಸಲು ಹೆಣಗಿದ್ದಾರೆ. ಆದರೆ ಅವರ ಹೆಸರು ಜನನಾಯಕ ಪಟ್ಟಿಯಿಂದ ವಂಚಿತವಾದದ್ದು ಕಳವಳಕಾರಕವಾದದ್ದು. ಈ ಕುರಿತು ಹಲವಾರು ಗಣ್ಯರು, ಸಾಮಾಜಿಕ ಚಿಂತಕರು ತಮ್ಮ ಅಭಿಪ್ರಾಯ/ಅನಿಸಿಕೆಗಳನ್ನು ವ್ಯಕ್ತಪಡಿಸಿದ್ದಾರೆ. ಅವುಗಳಲ್ಲಿ ಕೆಲವೊಂದನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

"ಶ್ಯಾಮಸುಂದರ ಅವರದು ಬಹುಮುಖ ವ್ಯಕ್ತಿತ್ವ. ಅವರೊಬ್ಬ ದೊಡ್ಡ ವಿದ್ವಾಂಸರು, ಪ್ರಬಲ ವಿಚಾರವಾದಿಗಳು, ಪ್ರಗತಿಪರ ಚಿಂತಕರು, ಖ್ಯಾತ ಲೇಖಕರು, ದಿಟ್ಟ ಸಮಾಜ ಸುಧಾರಕರು. ಅವರ ಸಂಘಟನೆ, ಹೋರಾಟ ಮತ್ತು ಬರವಣಿಗೆಯನ್ನು ಕುರಿತು ನಿರೀಕ್ಷಿತ ಪ್ರಮಾಣದಲ್ಲಿ ಅಧ್ಯಯನ ನಡೆದಿಲ್ಲ. ಹಾಗೆಯೇ ಭಾರತದ ದಲಿತ ವಿಮೋಚನೆಯ ಚರಿತ್ರೆಯಲ್ಲಿ ಅವರಿಗೆ ಸೂಕ್ತ ಸ್ಥಾನ-ಮಾನಗಳು ದೊರೆತಿಲ್ಲ. ಇದರ ಕಾರಣಗಳು ಶೋಧವಾಗಬೇಕು, ವಿಶ್ಲೇಷಣೆಯಾಗಬೇಕು. ಒಟ್ಟಾರೆ ಶ್ಯಾಮಸುಂದರರ ವ್ಯಕ್ತಿತ್ವಕ್ಕೆ ತಕ್ಕ ಗೌರವ ಸಿಗಬೇಕು" ಎಂಬುದು ಡಾ|| ಶಾಂತಿನಾಥ ದಿಬ್ಬದ ಅವರ ಆಶಯ.

ಖ್ಯಾತ ದಲಿತ ನಾಯಕರೋರ್ವರಾದ ಬಿ. ಶ್ಯಾಮಸುಂದರ ಅವರು ತೀರಿಕೊಂಡ 12 ವರ್ಷಗಳ ನಂತರ ಹಾಗೂ ಅವರು ಬರೆದ 15 ವರ್ಷಗಳ ನಂತರ ಪ್ರಕಟವಾದ ಈ ಕೃತಿ ವಿಶೇಷವಾದುದಾಗಿದೆ. ಶ್ರೀಯುತರು ಹಸ್ತಪ್ರತಿ ಪ್ರಕಟಣೆಗಾಗಿ ಸಿದ್ಧಗೊಳಿಸಿದ್ದರು. ಆದರೆ ಆ ಕೃತಿ ಎಲ್ಲೋ ಒಂದು ಕಡೆ ಬಿದ್ದಿತ್ತು. ಹುಡುಕಲಿಕ್ಕೆ 10 ವರ್ಷ ಕಳೆಯಬೇಕಾಯಿತು. ತದ ನಂತರ ಮೂರು ವರ್ಷಗಳ ಕಾಲ ಅದರ ಪ್ರಕಟಣೆಯಲ್ಲಿ ಕಳೆಯಬೇಕಾಯಿತು. ಇದರಿಂದಾಗಿ ಭಾರತೀಯ ಸಮಾಜದ ಕೃತಜ್ಞತೆಯ ಅರಿವಾಗಬಹುದು. ಈ ಶ್ರೇಷ್ಠ ಕೃತಿ ಓರ್ವ ಪ್ರತಿಭಾವಂತ ವ್ಯಕ್ತಿಯದು. ಈ ಕೃತಿಯ ತಯಾರಿಗಾಗಿ ಅವರು ಪಟ್ಟ ಶ್ರಮ ಅಪಾರವಾದದ್ದು. ಜಾತ್ಯಾಧಾರಿತ ನೆಲೆಯ ಭಾರತ ದೇಶದ ಪ್ರತಿಭೆಗೆ ಯಾವ ಬೆಲೆ ಇದೆ ಹೇಳಿ? ಇದರಿಂದಾಗಿಯೇ ಅವರ ಹಸ್ತ ಪ್ರತಿ ಹಲವಾರು ವರ್ಷ ಕೊಳೆಯಬೇಕಾಯಿತು. ಈ ಕಾರಣಕ್ಕಾಗಿ ಎಷ್ಟೇ ಪ್ರತಿಭಾವಂತರಿದ್ದರೂ, ಈ

ದೇಶದಲ್ಲಿ ಬೆಳಕಿಗೆ ಬರುವುದಿಲ್ಲ ಎಂಬುದು ಸರ್ವವಿದಿತ. ಬಿ. ಶ್ಯಾಮಸುಂದರರು ಅಂತಹ ನಿರ್ಲಕ್ಷಿತರಲ್ಲಿ ಒಬ್ಬರಾಗಿದ್ದಾರೆ ಎಂದು ವ್ಹಿ.ಟಿ. ರಾಜಶೇಖರ ಅವರು ಬಿ. ಶ್ಯಾಮಸುಂದರರು ತೀರಿಕೊಂಡ ನಂತರ ಪ್ರಕಟವಾದ ಕೃತಿಯನ್ನು ಕುರಿತು ಅಭಿಪ್ರಾಯಪಟ್ಟಿದ್ದಾರೆ.

ಗುಲಬರ್ಗಾ ವಿಶ್ವವಿದ್ಯಾಲಯದ ಮನೋವಿಜ್ಞಾನ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ ಡಾ।। ಎಸ್.ಐ. ಮೇಲಕೇರಿಯವರು ದಿ।। ಬಿ. ಶ್ಯಾಮಸುಂದರರನ್ನು ಜನಪರ ಚಿಂತಕನೆಂದು ಕರೆದು ತಮ್ಮ ಅಭಿಪ್ರಾಯಗಳನ್ನು ಈ ಕೆಳಕಂಡಂತೆ ವ್ಯಕ್ತಪಡಿಸಿದ್ದಾರೆ. ಬಿ. ಶ್ಯಾಮಸುಂದರರ ಸಾಧನೆಗಳನ್ನು ನಮ್ಮ ಜನ ಗಂಭೀರವಾಗಿ ಸ್ವೀಕರಿಸಿದಂತಿಲ್ಲ. ಅಲ್ಪ ಸಂಖ್ಯಾತ ಮುಸಲ್ಮಾನರೊಂದಿಗೆ ಕೈಗೂಡಿಸಿದ್ದಾರೆಂಬುದು ಅದಕ್ಕೆ ಕಾರಣವಾಗಿರಬಹುದು. ಹಾಗೆಯೇ ಅವರೊಬ್ಬ ಕಮ್ಯುನಿಸ್ಟ್‌ವಾದಿಗಳಾಗಿದ್ದರೆಂಬ ಕಾರಣವಿದ್ದರೂ ಇರಬಹುದು. ಏನಿದ್ದರೂ ಅವರ ಸಾದನೆ ಮಾತ್ರ ಸಣ್ಣದಲ್ಲ.

ಬಿ. ಶ್ಯಾಮಸುಂದರರ ಒಡನಾಡಿಗಳಲ್ಲಿ ಒಬ್ಬರಾದ ಗುಲಬರ್ಗಾದ ಡಾ।। ಕೆ. ದೇವೇಂದ್ರಪ್ಪ ಅವರು, ಬಿ. ಶ್ಯಾಮಸುಂದರ ಅವರನ್ನು ಡಾ।। ಬಿ.ಆರ್. ಅಂಬೇಡ್ಕರೋತ್ತರ ದಲಿತ ನಾಯಕರೆಂದು ಕರೆಯುತ್ತಾ ಹೈದ್ರಾಬಾದ್ ಕರ್ನಾಟಕದ ದಲಿತರಿಗೆ ಬಾಬು ಸಾಹೇಬರನ್ನು ಪ್ರತ್ಯಕ್ಷವಾಗಿ ನೋಡುವ ಹಾಗೂ ಅವರ ಭಾಷಣವನ್ನು ಕೇಳುವ ಭಾಗ್ಯ ಸಿಗಲಿಲ್ಲ. ಆದರೆ ಬಿ. ಶ್ಯಾಮಸುಂದರರನ್ನು ಇಲ್ಲಿಯ ಜನತೆ ಅಂಬೇಡ್ಕರ್‌ರ ರೂಪದಲ್ಲಿ ಕಾಣುತ್ತಿದ್ದರು. ಶ್ಯಾಮಸುಂದರ ಅಂತಹ ಸಮಾಜ ಸುಧಾರಕರು. ಕ್ರಾಂತಿಕಾರಿಗಳನ್ನು ನಮ್ಮ ದೇಶ ಗಮನಿಸದೇ ಇರುವುದು ಒಂದು ದುರಂತದ ಸಂಗತಿಯಾಗಿದೆ. ಇವರು (ಬಿ. ಶ್ಯಾಮಸುಂದರ) ನಿಧನರಾದಾಗ ಉದ್ದೇಶಪೂರ್ವಕವಾಗಿಯೋ ಏನೋ, ಅವರ ನಿಧನದ ವಾರ್ತೆಯನ್ನು ಒಂದೆರಡು ದಿನಪತ್ರಿಕೆಗಳ ಹೊರತಾಗಿ ಬೇರೆ ಯಾವ ಪತ್ರಿಕೆಗಳೂ ಪ್ರಸಾರ ಮಾಡಲಿಲ್ಲ. ಆಗಿನ ರಕ್ಷಣಾ ಮಂತ್ರಿಗಳಾದ ಬಾಬು ಜಗಜೀವನರಾಮರು ಮಾತ್ರ ಅವರ ನಿಧನದ ಬಗ್ಗೆ ಶೋಕ ವ್ಯಕ್ತಪಡಿಸಿದ್ದರು. ಆದರೆ ಅದೇ ಬಿ. ಶ್ಯಾಮಸುಂದರರು ದಿನಾಂಕ 26.4.1968 ರಂದು ಘೋಷಿಸಿದ "ಭೀಮಸೇನೆ" ಎಂಬ ಸಂಘಟನೆ ಬಗ್ಗೆ ದೇಶದ ಪ್ರತಿಯೊಂದು ಭಾಷೆ ಪತ್ರಿಕೆಗಳಲ್ಲಿ ದೊಡ್ಡ ಸಮಾಚಾರವನ್ನು ಪ್ರಕಟಿಸಲಾಗಿತ್ತು. ಆಕಾಶವಾಣಿ ಹಾಗೂ ಬಿಬಿಸಿ ಲಂಡನ್ ಭೀಮಸೇನೆ ಬಗ್ಗೆ ಪ್ರಸಾರ ಮಾಡಿದ್ದವು. ಅಲ್ಲದೆ ಕೆಲವು ದಿವಸಗಳವರೆಗೆ ಶ್ಯಾಮಸುಂದರರ ಹಾಗೂ ಭೀಮಸೇನೆಯ ಪರವಾದ ಹಾಗೂ ವಿರುದ್ಧವಾದ ಲೇಖನಗಳು ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾದವು. ಆದರೆ ಅವರು ನಿಧನರಾದಾಗ ಬಹಳಷ್ಟು ಪತ್ರಿಕೆಗಳಲ್ಲಿ ಸಮಾಚಾರ ಪ್ರಕಟಿಸದೇ ಇದ್ದದ್ದು ಉದ್ದೇಶಪೂರ್ವಕವಾಗಿ ಅಜ್ಞಾತರನ್ನಾಗಿ ಮಾಡಲಾಯಿತೇ ಎಂಬ ಸಂದೇಹಕ್ಕೆ ಎಡೆ ಮಾಡಿಕೊಟ್ಟಿದೆ ಎನ್ನುತ್ತಾರೆ ಡಾ।। ಕೆ. ದೇವೇಂದ್ರಪ್ಪನರು.

ಸವರ್ಣೀಯರ ಹಿಡಿತದಿಂದ ಬಳಲುತ್ತಿದ್ದ ದಲಿತನೊಬ್ಬನಿಗೆ 1968ರಲ್ಲಿ ಹೊರಬರುವಂತೆ ಪ್ರೋತ್ಸಾಹಿಸಿದ ಶ್ರೀ ಬಿ. ಶ್ಯಾಮಸುಂದರರು ಆಂಧ್ರಪ್ರದೇಶ ಸರ್ಕಾರದ ಪೀಡನೆಗೊಳಗಾಗಿದ್ದರು.

ಅಲ್ಲದೇ ಮೈಸೂರು ಸರ್ಕಾರದ ವಿಧಾನಸಭಾ ಸದಸ್ಯರಾಗಿದ್ದಾಗ 1959ರಲ್ಲಿ ದಲಿತರ ಸಮಸ್ಯೆಯ ಬಗೆಗೆ ಲೋಕಸಭೆಗೆ ಒಂದು ಪೆಟೀಷನ್ ಸಲ್ಲಿಸಿದ್ದರು.

ಡಾ|| ಬಿ.ಆರ್. ಅಂಬೇಡ್ಕರ್‌ರನ್ನು ಉದ್ದೇಶಿಸಿ ಒಂದು ಅರ್ಥಪೂರ್ಣವಾದ ಕಾರಣವನ್ನು ತಮಿಳುನಾಡಿನ ದ್ರಾವಿಡ ಕಳಗಂ ಸಂಘಟನೆಯ ಸಂಸ್ಥಾಪಕರಾದ ಪೆರಿಯಾರ್ ರಾಮಸ್ವಾಮಿ ನಾಯ್ಕರ್ ಈ ಕೆಳಕಂಡಂತೆ ಅಭಿಪ್ರಾಯಪಟ್ಟಿದ್ದಾರೆ.

ಭಾರತ ದೇಶದಲ್ಲಿ ಹಿಂದೂ ಧರ್ಮದಲ್ಲಿನ ಕೆಟ್ಟ ವಿಚಾರಗಳ ಹಾಗೂ ಅದರಲ್ಲಿನ ವರ್ಣಾಶ್ರಮದ ಬಗ್ಗೆ ಯಾವ ವ್ಯಕ್ತಿ ವಿರೋಧ ಮಾಡುತ್ತಾನೋ ಅಂತಹ ವ್ಯಕ್ತಿಯ ಹೆಸರು ಹಾಗೂ ವಿಚಾರಗಳನ್ನು ಕಡೆಗಣಿಸಿ ಅವರನ್ನು ಪ್ರಸಿದ್ಧಿಗೆ ಬರದ ಹಾಗೆ ಅಜ್ಞಾತರನ್ನಾಗಿ ಮಾಡುತ್ತಾರೆ.

ಇದೇ ರೀತಿಯಲ್ಲಿ ಬಿ. ಶ್ಯಾಮಸುಂದರರು ತಮ್ಮ ಜೀವನದ ಕೊನೆಯವರೆಗೂ ದಲಿತರ ಉದ್ಧಾರಕ್ಕೆ ಟೊಂಕ ಕಟ್ಟಿಕೊಂಡು, ಅನೇಕ ಕಾರ್ಯಚಟುವಟಿಕೆಗಳನ್ನು ಜರುಗಿಸಿದ್ದರೂ ಕೂಡ ಅವರ ಹೆಸರು ಜನನಾಯಕರ ಪಟ್ಟಿಯಲ್ಲಿ ಸೇರದೇ ಇದ್ದುದು ಅಕ್ಷರಶಃ ಸತ್ಯ.

# ಶ್ರೇಷ್ಠ ಚಿಂತಕ ಮತ್ತು ಸಮಾಜ ಸುಧಾರಕ

ಡಾ: ಬಿ.ಆರ್.ಅಂಬೇಡ್ಕರ್ ಕಟ್ಟಾ ಅನುಯಾಯಿಗಳಾಗಿದ್ದ ಬಿ. ಶ್ಯಾಮಸುಂದರ ಅವರು ಕರ್ನಾಟಕ, ಆಂಧ್ರ ಪ್ರದೇಶ ಮತ್ತು ಮಹಾರಾಷ್ಟ್ರಗಳಲ್ಲಿ ಡಾ: ಅಂಬೇಡ್ಕರ್‌ರ ತತ್ವ ಚಿಂತನೆಗಳನ್ನು ಪ್ರಚುರಪಡಿಸಲು ಶ್ರಮವಹಿಸಿದ್ದಾರೆ. ಸಾಂಪ್ರದಾಯಿಕ ವ್ಯವಸ್ಥೆಯನ್ನು ಧಿಕ್ಕರಿಸುವುದರೊಂದಿಗೆ, ಜಾತಿ ಪದ್ಧತಿ ಮತ್ತು ಶೋಷಣೆಯನ್ನು ನಿರ್ಮೂಲನ ಮಾಡಲು ಹಂಬಲಿಸಿದವರು. ಸಾಮಾಜಿಕ ನೆಲೆಯಲ್ಲಿಯೇ ನಿಂತು, ಧಾರ್ಮಿಕ ವ್ಯವಸ್ಥೆಗೆ ಸವಾಲಾಗಿಸುವುದರಲ್ಲಿ ಶ್ಯಾಮಸುಂದರರ ವ್ಯಕ್ತಿತ್ವ, ಆಳವಾದ ಚಿಂತನೆಗಳು ಕಂಡುಬರುತ್ತವೆ. ಅವರೊಬ್ಬ ನೊಂದವರ ಪರ ಧ್ವನಿ ಎತ್ತುವ ವೀರ ಹೋರಾಟಗಾರ, ಸಮಾಜ ಸುಧಾರಕ, ಉತ್ತಮ ವಾಗ್ಮಿ, ಸಾಹಿತಿ ಚಿಂತಕ ಮತ್ತು ಸಂಘಟಕರು ಎಂಬುದಕ್ಕೆ ಅನೇಕ  ಪುರಾವೆಗಳಿವೆ. ಬಹುಭಾಷಾ ಪಾಂಡಿತ್ಯದಿಂದಾಗಿ ಜನ ಮನದಲ್ಲಿ ಅಚ್ಚಳಿಯದೇ ಉಳಿದಿದ್ದಾರೆ. ಬಿ. ಶ್ಯಾಮಸುಂದರ ಬುದ್ಧ, ಸಂತ ಕಬೀರ, ಮಹಾತ್ಮ ಜ್ಯೋತಿಬಾಫುಲೆ, ನಾರಾಯಣ ಗುರು, ಪೆರಿಯರ್ ಮತ್ತು ಅಂಬೇಡ್ಕರ್ ಮುಂತಾದ ಸಮಾಜ ಸುಧಾರಕರ ಚಿಂತನೆಗಳಿಂದ ಪ್ರೇರಿತರಾದವರು. ಭಾರತೀಯ ಸಾಂಸ್ಕೃತಿಕ, ಧಾರ್ಮಿಕ ವಿಚಾರ ಕುರಿತಂತೆ ಆಳವಾದ ಅಧ್ಯಯನ ಅವರ ಕೃತಿಗಳಲ್ಲಿ ಕಂಡುಬರುತ್ತದೆ. ಸಾರ್ವಜನಿಕ ಕ್ಷೇತ್ರಕ್ಕೆ ಅನಿವಾರ್ಯವಾಗಿ ಬಂದ ಶ್ಯಾಮಸುಂದರ ಅವರಿಂದ ಸಮಾಜಕ್ಕೆ ಸಾರ್ಥಕ ಸೇವೆ ಸಂದಿದೆ. ಅವರು ವಿದ್ಯಾರ್ಥಿ ಜೀವನದಿಂದಲೇ ಸಂಘ ಸಂಸ್ಥೆಗಳ ನೇತೃತ್ವ ವಹಿಸಿದ್ದರು. ವಿವಿಧ ನೌಕರರ ಒಕ್ಕೂಟಗಳ ಮುಂದಾಳಾಗಿ ಹೋರಾಟ ಮಾಡಿದವರಾಗಿದ್ದಾರೆ. ರೈತರ, ದಲಿತರ ಸಮಸ್ಯೆಗಳಿಗೆ ಸ್ಪಂದಿಸಿ 1947ರಲ್ಲಿ ಬಿ.ಎಸ್. ವೆಂಕಟರಾವ ಅವರೊಂದಿಗೆ ತಮ್ಮ ಒಂದು ಲಕ್ಷ ಜನ ಅನುಯಾಯಿಗಳೊಂದಿಗೆ ಭೂ ಮಾಲಿಕತ್ವ ರದ್ದುಗೊಳಿಸಿ ಉಳುವವನಿಗೆ ಭೂಮಿ ಕೊಡಿ ಎಂದು ಹೈದ್ರಾಬಾದ್‌ನಲ್ಲಿ ಬೃಹತ್ ಪ್ರತಿಭಟನೆ ಮಾಡಿದರು. ಅದರ ಫಲವಾಗಿ ನಿಜಾಂ ಸರಕಾರ ಬಡ ಜನರಿಗೆ, ದೀನ ದಲಿತರಿಗೆ ಭೂಮಿ ಹಂಚಲು ಮುಂದಾಯಿತು. ಇದರಿಂದಾಗಿ ಜನರು ಶ್ಯಾಮಸುಂದರರನ್ನು "ಶೇರ್ ಎ ದಕ್ಕನ್" ಎಂದು ಕರೆದರು.

ಜೀವ ಸಂಸ್ಕೃತಿಯ ವಿರೋಧಿಗಳಾದ ಆರ್ಯರು ಈ ದೇಶಕ್ಕೆ ಆಗಮಿಸುವ ಪೂರ್ವದಲ್ಲಿ ನಾವು ಇಲ್ಲಿಯ ಆಳರಸರಾಗಿದ್ದೆವು. ನಾವು ಎಂದೂ ಹಿಂದೂಗಳಾಗಿದ್ದಿಲ್ಲ ಹಾಗೂ ಹಿಂದೂಗಳಾಗುವುದಿಲ್ಲ ಎಂದು ದಲಿತರಿಗೆ ಧೈರ್ಯದಿಂದ ತಮ್ಮ ಶ್ರೇಷ್ಠ ಕೃತಿ "ಮೂಲ ಭಾರತೀಯರು" ಇದರಲ್ಲಿ ಹೇಳಿದ್ದಾರೆ. ಸ್ವತಂತ್ರ ದಲಿತ ವೇದಿಕೆ ಪರವಾಗಿ ಹಿಂದಿನ ನಿಜಾಮ ಸಂಸ್ಥಾನದ ಕಾರ್ಯಕಾರಿ ಸಮಿತಿಯ ಅಧ್ಯಕ್ಷರಾದ ಸರ್ .ಮಿರ್ಜಾ ಇಸ್ಮಾಯಿಲ್‌ರಿಗೆ ಸಲ್ಲಿಸಿದ ಮನವಿಯಲ್ಲಿ ಈ ರೀತಿ ಹೇಳಿದ್ದಾರೆ. ನಾವು 40 ಲಕ್ಷ ದಲಿತರು ಎದ್ದು ಕಾಣುವ ರೀತಿಯಲ್ಲಿ ವಾಸಿಸುತ್ತಿದ್ದೇವೆ. ಅದೇ ರೀತಿ ಭಾರತದಲ್ಲಿಯೂ ದಲಿತರ ಜೀವನ ಒಂದು ಪ್ರಮುಖ ಪ್ರವಾಹವೇ ಆಗಿದೆ. ಈ ದೇಶದ ಮೂಲ ನಿವಾಸಿಗಳಾದ ದಲಿತರು ತಮ್ಮದೇ ಆದ ಜೀವನ ಶೈಲಿ, ಕಾರ್ಯ ವೈಖರಿಯನ್ನು

ಹೊಂದಿದ್ದಾರೆ. ಅವರಿಗೆ ಅವರದೇ ಆದ ಊಟ, ಉಡಿಗೆ, ಭಾಷೆ, ವಿಶಿಷ್ಟ ಸಂಸ್ಕೃತಿ ಇರುತ್ತದೆ. ಹೀಗಿದ್ದು ಅನಂತರ ಆಗಮಿಸಿದ ಹಿಂದೂಗಳು ತಮ್ಮ ಅಮಾನವೀಯ ಧರ್ಮದಿಂದ ದಲಿತರನ್ನು ಶೋಷಣೆಗೆ ಒಳಪಡಿಸಿದರು. ದಲಿತರನ್ನು ಕೆಳ ದರ್ಜೆಯವರೆಂದು ನಡೆಸಿಕೊಳ್ಳುವುದು, ಅಸ್ಪೃಶ್ಯರೊಂದಿಗೆ ಮಾತನಾಡುವುದು ಉಚಿತವಲ್ಲ ಎಂಬ ಭಾವನೆ ಇದೆ. ಹಿಂದೂಗಳು ತಮ್ಮ ಅವೈಜ್ಞಾನಿಕ ಹಾಗೂ ಅತಾರ್ಕಿಕ ವರ್ಣಾಶ್ರಮ ಪದ್ಧತಿಯಿಂದ ದಲಿತರನ್ನು ನಿರ್ಗತಿಕರನ್ನಾಗಿ ಮಾಡಿದೆ ಎಂದಿದ್ದರು.

ಸ್ವಾತಂತ್ರ್ಯ ಪೂರ್ವದಲ್ಲಿ ಬಿ. ಶ್ಯಾಮಸುಂದರರು ನಿರ್ಮಿಸಿದ 'ದಲಿತ ಮುಸ್ಲಿಂ ಒಕ್ಕೂಟ' ಮಹತ್ವದ ಕೊಡುಗೆಯಲ್ಲೊಂದು. ತುಳಿತಕ್ಕೊಳ್ಳಗಾದ ಈ ಎರಡೂ ಸಮುದಾಯಗಳ ಸಾಮಾಜಿಕ ಸ್ವರೂಪವನ್ನು ಅಭ್ಯಸಿಸಿ ನಿರ್ಮಿಸಿದ ಈ ಒಕ್ಕೂಟವು, ಎರಡೂ ಸಮುದಾಯಗಳ ಪರಸ್ಪರ ಒಳಿತಿಗಾಗಿತ್ತು. ಹೀಗೆ ಸಾಮಾಜಿಕ ಬದಲಾವಣೆಯಲ್ಲಿ ತೊಡಗಿದ್ದ ಶ್ಯಾಮಸುಂದರರನ್ನು ಇಸ್ಲಾಂ ಏಜೆಂಟ್, ಮತ ಘಾತುಕ ವ್ಯಕ್ತಿ ಎಂದು ದೆಹಲಿಯ ಆರ್ಗನೈಜರ್ ಪತ್ರಿಕೆ ಹಣೆಪಟ್ಟಿ ಕಟ್ಟಿತ್ತು. ಆದರೆ, ಶ್ಯಾಮಸುಂದರರ ಸ್ನೇಹಿತರು, ಕೇಂದ್ರದ ಹಿಂದಿನ ಗೃಹ ಸಚಿವರು ಮತ್ತು ಕರ್ನಾಟಕದ ರಾಜ್ಯಪಾಲರೂ ಆಗಿದ್ದ ಉಮಾಶಂಕರ ದಿಕ್ಷೀತರು ಇದರಿಂದ ನೊಂದು ಶ್ಯಾಮಸುಂದರ ಅಂತಹ ವ್ಯಕ್ತಿಯಲ್ಲ ಎಂದು ಪತ್ರಿಕೆ ಸಂಪಾದಕ ಮಲ್ಕಾನಿಯವರಿಗೆ ಪತ್ರ ಬರೆದಿದ್ದಿದೆ. ನಿಜಾಮ ಸಂಸ್ಥಾನವು ಹೈದ್ರಾಬಾದ ಕರ್ನಾಟಕದ ದಲಿತರ ಏಳ್ಗೆಗಾಗಿ ಪ್ರಯತ್ನಿಸಿದ್ದನ್ನು ಅಂಬೇಡ್ಕರ್ ಮತ್ತು ಹಿಂದೂ ನಾಯಕರು ಶ್ಲಾಘಿಸಿದ್ದರು. ಇನ್ನೊಂದು ದೃಷ್ಟಿಯಲ್ಲಿ ಹಿಂದೂ ಮೇಲ್ವರ್ಗದವರಂತೆ, ಮುಸಲ್ಮಾನರು ದಲಿತರನ್ನು ಕೀಳಾಗಿ ನಡೆಸಿಕೊಳ್ಳಲಾರರು ಎಂಬ ಬಿ..ಶ್ಯಾಮಸುಂದರ ಅವರ ನಂಬಿಕೆ ಮುಸ್ಲಿಂರನ್ನು ಪ್ರೀತಿಸುವುದಕ್ಕೆ ಕಾರಣವಾಗಿದ್ದವು. ಈ ರೀತಿಯಲ್ಲಿ ಮುಸಲ್ಮಾನರ ಮಧುರ ಬಾಂಧವ್ಯ ಹೊಂದಿದ್ದ ಶ್ಯಾಂಸುಂದರರನ್ನು ಅನೇಕ ಹಿಂದೂಗಳು ದೇಶ ವಿರೋಧಿಯೆಂದು ಕರೆದರು. ಇನ್ನೊಂದೆಡೆ ರಜಾಕಾರರು ಶ್ಯಾಮಸುಂದರರನ್ನು ದ್ವೇಷಿಸುತ್ತಿದ್ದರಲ್ಲದೆ ಅವರನ್ನು ತಾತ್ಕಾಲಿಕ ಸರ್ಕಾರದಲ್ಲಿ ಸೇರಿಸಿಕೊಳ್ಳದೇ ಇದ್ದುದ್ದು ಈಗ ಇತಿಹಾಸ. ಬಿ.ಶ್ಯಾಮಸುಂದರರ ದೃಷ್ಟಿಯಲ್ಲಿ ಧರ್ಮವು ಮಾನವ ಸಮಸ್ಯೆಗಳನ್ನು ಬಗೆಹರಿಸಲಾರದು. ಈ ದಿಶೆಯಲ್ಲಿ ಅವರೊಬ್ಬ ವಿಚಾರವಾದಿಯಾಗಿದ್ದರಲ್ಲದೆ. ಮಾರ್ಕ್ಸವಾದಿಯೂ ಆಗಿದ್ದರು.

ಔರಂಗಾಬಾದಿನಲ್ಲಿ ನಡೆದ ತುಳಿತಕ್ಕೊಳಗಾದವರ ಸಮ್ಮೇಳನದ ಅಧ್ಯಕ್ಷತೆಯಲ್ಲಿ ಮುಸಲ್ಮಾನರೊಂದಿಗೆ ಕೈಗೂಡಿಸಿ ಮೇಲ್ವರ್ಗದ ಹಿಂದೂಗಳ ವಿರುದ್ಧ ನ್ಯಾಯಕ್ಕಾಗಿ ಹೋರಾಡುವ ಕಾಲ ಈಗ ಬಂದಿದೆ ಎಂದು ಹೇಳಿದ್ದಾರೆ. ನಿಜಾಮರ ನಂಬಿಗಸ್ಥ ಸ್ನೇಹಿತರಾದ ಬಿ. ಶ್ಯಾಮಸುಂದರ್ ಅವರು, ನಿಜಾಂ ಸರ್ಕಾರದ ಮಂತ್ರಿಗಳಾಗಿದ್ದಾಗ, ದಲಿತರ ಶಿಕ್ಷಣಕ್ಕಾಗಿ ಶೋಷಿತ ಕಲ್ಯಾಣ ಸಮಿತಿಗೆ ಒಂದು ಕೋಟಿ ರೂಪಾಯಿಗಳ ಆರ್ಥಿಕ ಸಹಾಯ ಪಡೆದು, ವಿದ್ಯಾರ್ಥಿ ನಿಲಯ ಮತ್ತಿತರ ಕಲ್ಯಾಣ ಸಂಸ್ಥೆಗಳನ್ನು ತೆರೆಯಲು ಅನುವು ಮಾಡಿಕೊಟ್ಟರು. ಔರಂಗಾಬಾದನಲ್ಲಿ 28 ವಸತಿ ನಿಲಯಗಳನ್ನು ಸ್ಥಾಪಿಸಿದರು.

ಡಾ: ಬಾಬಾಸಾಹೇಬ ಅಂಬೇಡ್ಕರ್ ಪ್ರಾರಂಭಿಸಿದ ಪೀಪಲ್ಸ್ ಎಜ್ಯುಕೇಶನ್ ಸೊಸೈಟಿಗೆ ಈ ಸಮಿತಿಯು 12 ಲಕ್ಷ ರೂಪಾಯಿ ಧನ ಸಹಾಯ ನೀಡಿತು. ಶೋಷಿತರ ಕಲ್ಯಾಣ ಸಮಿತಿ ಸೂಚನೆಯ ಮೇರೆಗೆ Madaras-E-Past Akwam (School for the Depressed Class) ಎಂಬ ಪ್ರತ್ಯೇಕ ಶಾಲೆಗಳನ್ನು ಶೋಷಿತರಿಗಾಗಿ ತೆರೆಯಲಾಯಿತು. ಇದಕ್ಕೆ ಪೂರಕವಾಗಿ ವಿದ್ಯಾರ್ಥಿ ವಸತಿ ನಿಲಯಗಳನ್ನು ನಿಜಾಂ ರಾಜ್ಯದೆಲ್ಲೆಡೆ ಸ್ಥಾಪಿಸಲಾಯಿತು. ಸಿಕ್ರಂದ್ರಬಾದ್‌ನ ದಲಿತ ಮಕ್ಕಳ ಸರ್ ವಿಲಿಯಂ ಬಾರ್ಟಿನ್ ಶಾಲೆಗೆ ಆರ್ಥಿಕ ನೆರವನ್ನು ನೀಡಿ ಶಿಕ್ಷಣ ಮುಂದುವರೆಯುವಂತೆ ಮಾಡಲಾಯಿತು. 40 ಸಾವಿರ ವಿನಿಯೋಗಿಸಿ ಹೈದ್ರಾಬಾದನಲ್ಲಿ ಬಾಡಿಗೆ ರಹಿತವಾದ ಬಳಕೆಗಾಗಿ ದಲಿತ ಸೇವಕ ಮಂಡಳಿಗೆ ಒಪ್ಪಿಸಲಾಯಿತು. ಅದರಂತೆ ಬೀದರನಲ್ಲಿ ಒಂದು ಚರ್ಮ ಹದ ಮಾಡುವ ತರಬೇತಿ ಶಾಲೆಯನ್ನು ತೆರೆಯಲಾಯಿತು.

ಶಿಕ್ಷಣ ಕ್ಷೇತ್ರದಲ್ಲಿ ದಲಿತರಿಗಾಗಿ ಪ್ರಗತಿಪರ ಕಾರ್ಯಕ್ರಮ ರೂಪಿಸುವಲ್ಲಿ ಶ್ಯಾಮಸುಂದರರು ನಿಜಾಮ ಸರ್ಕಾರದ ಪ್ರೇರಕ ಶಕ್ತಿಯಾಗಿದ್ದರು. ನಿಜಾಂ ಸರ್ಕಾರ ದಲಿತರ ಅಭಿವೃದ್ಧಿಗೆ ಹೆಚ್ಚಿನ ಸಹಕಾರ ಕೊಡುತ್ತಿರುವುದರಿಂದ ಅದು ಸ್ವತಂತ್ರವಾಗುಳಿದರೆ ದಲಿತರ ಹಿತಾಸಕ್ತಿಗೆ ಇನ್ನಷ್ಟು ಸಹಾಯ ದೊರೆಯಬಹುದೆಂಬುದು ಬಿ.ಶ್ಯಾಮಸುಂದರ್ ಅವರ ದೂರಾಲೋಚನೆಯಾಗಿತ್ತು.

ಶ್ಯಾಮಸುಂದರರು ಜಾತ್ಯಾತೀತರಾಗಿ ಸರ್ಕಾರದ ಜಾತಿ ರಾಜಕೀಯದಲ್ಲಿ ಆಸಕ್ತಿ ಹೊಂದಿದ್ದರು. ತುಳಿತಕ್ಕೊಳಗಾದವರ ವರ್ಗಗಳ ವೇದಿಕೆ ಮತ್ತು ದಲಿತರ ಒಕ್ಕೂಟಗಳ ಮಧ್ಯದ ಘರ್ಷಣೆಯನ್ನು ಗಮನಿಸಿ, ಈ ಸಂಘಟನೆಗಳ ನಡುವಿನ ವ್ಯತ್ಯಾಸ ತೊಡೆದು ಹಾಕಲು ಪ್ರಾಮಾಣಿಕ ಪ್ರಯತ್ನ ಮಾಡಿದರು. ಅಂದು ಆಂಧ್ರದಲ್ಲಿದ್ದ ಭಗೇಲಾ ಪದ್ಧತಿಯನ್ನು (ದಲಿತನೊಬ್ಬ ದಣಿಯಿಂದ ಸಾಲ ಪಡೆದರೆ ಆತನ ಇಡೀ ಕುಟುಂಬವೇ ದಾಸ್ಯದಲ್ಲಿರುವ ಪದ್ಧತಿ) ನಿರ್ಮೂಲನೆ ಮಾಡಲು ದಲಿತ ಒಕ್ಕೂಟಗಳು ಸರ್ಕಾರಕ್ಕೆ ಮನವಿ ಸಲ್ಲಿಸಿ, 1947ರಲ್ಲಿ ಕಾಯ್ದೆಯಾಗಿದ್ದು ಅವರ ಪಾಲಿಗೆ ಮಾನವ ಹಕ್ಕುಗಳ " ಮ್ಯಾಗ್ನಾ ಕಾರ್ಟಾ" ಆಗಿದೆ.

ದಲಿತರಿಗೆ ಭೂಮಿಯನ್ನು ಒದಗಿಸಲು ಶ್ಯಾಮಸುಂದರರು ಪ್ರಯತ್ನಿಸಿದರು. ಶ್ಯಾಮಸುಂದರರು ಆಗಿನ ಮೈಸೂರ ರಾಜ್ಯದ ಶಾಸಕರಾಗಿ, ದಲಿತರ ಪ್ರಗತಿಗಾಗಿ ಆಯಾ ಕ್ಷೇತ್ರದ ಪ್ರಗತಿಯು ಅಗತ್ಯವೆಂದು ವಿಧಾನಸಭೆಯಲ್ಲಿ ವಿಚಾರ ಮಂಡಿಸಿದರು. ಅತಿ ಹಿಂದುಳಿದ ಹೈದ್ರಾಬಾದ ಕರ್ನಾಟಕದ ಪ್ರಗತಿಗೆ ಗುಡಿ ಕೈಗಾರಿಕೆಗಳು, ಕಾರ್ಖಾನೆಗಳು ಆರಂಭವಾಗಬೇಕು. ಆದಕ್ಕಾಗಿ ಸಮೀಕ್ಷೆಯ ಅಗತ್ಯವಿದೆ ಗುಲಬರ್ಗಾ, ರಾಯಚೂರು ಮತ್ತು ಬೀದರ ಜಿಲ್ಲೆಗಳಲ್ಲಿ ಕೈಗಾರಿಕಾ ಪ್ರದೇಶಗಳನ್ನು ಆರಂಭಿಸಬೇಕೆಂದು ವಿನಂತಿಸಿದ್ದರು.

# ಮತಾಂತರ ವಿರೋಧಿಸಿದ ಶ್ಯಾಮಸುಂದರ

ದಲಿತರು ಭಾರತದ ಮೂಲ ನಿವಾಸಿಗಳು, ಅವರು ಯಾವ ಧರ್ಮಕ್ಕೂ ಸೇರದವರಾಗಿದ್ದಾರೆ. ಅವರಿಗೆ ಯಾವ ಧರ್ಮದ ಅಗತ್ಯವೂ ಇಲ್ಲ ಎಂದು ಬಿ. ಶ್ಯಾಮಸುಂದರರು ಪ್ರತಿಪಾದಿಸಿದ್ದಾರೆ. ಧರ್ಮವನ್ನು ಬದಲಾಯಿಸುವುದರಿಂದ ಆರ್ಥಿಕವಾಗಿ, ಸಾಮಾಜಿಕವಾಗಿ ಯಾವುದೇ ಸಮುದಾಯದ ಜೀವನವನ್ನು ಸುಧಾರಿಸಲು ಸಾಧ್ಯವಿಲ್ಲ ಎಂದು ದಲಿತರಿಗೆ "ಯಾವ ಧರ್ಮಕ್ಕೂ ಸೇರಬೇಡಿ" ಎನ್ನುತ್ತಿದ್ದರು. ದಲಿತರು ಮತಾಂತರಗೊಳ್ಳುವ ಆಸೆ ಮೂಡಿಸಿದವರೇ ಮೇಲ್ಜಾತಿಯವರು ಎಂದು ಟೀಕಿಸುತ್ತಿದ್ದರು. ಈ ಕಾರಣದಿಂದಾಗಿ ವಿಧಾನ ಸಭೆಯ ಚರ್ಚೆಯಲ್ಲಿ ಮೇಲ್ಜಾತಿಯವರನ್ನು ವಿರೋಧಿಸಿದ್ದೂ ಇದೆ. ಕ್ರಿಶ್ಚಿಯನ್ನರು ಹೊರದೇಶದಿಂದ ಹಣ ತಂದು ಮತಾಂತರದ ಆಸೆ ಹೆಚ್ಚಿಸಿ, ತಮ್ಮ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುತ್ತಿರುವ ಬಗ್ಗೆ ವಿಷಾದಿಸಿದರು. ಹಣದ ಆಮಿಷಗಳಿಂದಾದ ಮತಾಂತರದಿಂದ, ರಾಜಕೀಯ ಶಕ್ತಿ ಬಲಗೊಳ್ಳುತ್ತದೆ. ಅದರಿಂದ ದೇಶದ ಸ್ವಾತಂತ್ರ್ಯಕ್ಕೆ ಧಕ್ಕೆ ಬರಬಹುದು, ದಲಿತರನ್ನು ಶೋಷಿಸುತ್ತಿರುವ ಸವರ್ಣೀಯರೇ ಇದಕ್ಕೆ ಜವಾಬ್ದಾರರಾಗಬೇಕಾಗುತ್ತದೆ. ಇದೆಲ್ಲ ಗೊತ್ತಿದ್ದೂ ಸವರ್ಣೀಯರು ದಲಿತರ ವಿರುದ್ಧ ಕೆಲಸ ಮಾಡುತ್ತಿದ್ದಾರೆ ಎಂದು ಆಪಾದಿಸಿದ್ದರು.

ಇಂದು ನೂರಾರು ದಲಿತರು ಕ್ರಿಶ್ಚಿಯನ್ನರಾಗುತ್ತಿದ್ದಾರೆ. ಬೀದರ ಜಿಲ್ಲೆಯಲ್ಲಿಯೇ 22 ಸಾವಿರ ದಲಿತರು ಕ್ರಿಶ್ಚಿಯನ್ನರಾಗಿದ್ದಾರೆ. ಈ ಪ್ರಕ್ರಿಯೆ ದಿನಾಲೂ ನಡೆಯುತ್ತಿವೆ. ಇದೆಲ್ಲ ಧರ್ಮದ ಅಧಃಪತನವಲ್ಲವೇ? ಎಂದು ಅಂದಿನ ಮೈಸೂರ ರಾಜ್ಯ ವಿಧಾನ ಸಭೆಯಲ್ಲಿ ದಿನಾಂಕ17.6.1957ರಂದು ಮಾಡಿದ ಭಾಷಣ ಶ್ಯಾಮಸುಂದರರು ಮತಾಂತರ ವಿರೋಧಿ ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಇದಕ್ಕೂ ಮೊದಲು ಮಹಾರಾಷ್ಟ್ರದ ಪರಭರಣಿಯಲ್ಲಿ ಶ್ಯಾಮಸುಂದರರ ನೇತೃತ್ವದಲ್ಲಿ ದಲಿತರ ಸಮಾವೇಶ ನಡೆಯಿತು. ಈ ಸಮಾವೇಶದ ಮುಖ್ಯ ಉದ್ದೇಶವೆಂದರೆ ಶ್ರೀ ಬಿ.ಎಸ್. ವೆಂಕಟರಾವ ಅವರ ನೇತೃತ್ವದಲ್ಲಿ ದಲಿತರ ಸರ್ವಾಂಗೀಣ ಅಭಿವೃದ್ಧಿಗೆ ಶ್ರಮಿಸುವುದು. ಇನ್ನೊಂದು ಮಹತ್ವದ ನಡಾವಳಿಯೆಂದರೆ ದಲಿತರ ಮತಾಂತರವನ್ನು ತಡೆಯುವುದಾಗಿತ್ತು

ಧಾರ್ಮಿಕ ಮತಾಂತರ ವಿಷಯವಾಗಿ ಡಾ: ಅಂಬೇಡ್ಕರ್ ಅವರೊಂದಿಗೆ ಬಿ. ಶ್ಯಾಮಸುಂದರ ಅವರು ಕೆಲವು ಭಿನ್ನಾಭಿಪ್ರಾಯಗಳನ್ನು ಹೊಂದಿದ್ದರು. ಶ್ಯಾಮಸುಂದರರ ಪ್ರಕಾರ ಮತಾಂತರ ದಲಿತರ ದಿನ ನಿತ್ಯದ ಜೀವನಕ್ಕಾಗಿ ಅಗತ್ಯವಾಗಿರಲಿಲ್ಲ. ಸಾಂತ್ವನಕ್ಕಾಗಿ ದಲಿತರು ಇನ್ನೊಂದು ಧರ್ಮ ಸೇರಿದರೆ ಅಲ್ಲಿ ಕೇವಲ ಕೃತ್ರಿಮ ಸಮಾನತೆ ಮತ್ತು ಭ್ರಾತೃತ್ವ ಇರುತ್ತದೆ. ದಲಿತರು ಮೂಲ ಭಾರತೀಯರಾಗಿರುವುದರಿಂದ, ಅವರಿಗೆ ಧರ್ಮವೇ ಇಲ್ಲದ್ದರಿಂದ, ಧರ್ಮ ಮತ್ತು ಮತಾಂತರಗಳ ಅಗತ್ಯವಿಲ್ಲ. ಅಲ್ಲದೆ ಮತಾಂತರದಿಂದ ದಲಿತರ ಆರ್ಥಿಕ ಸ್ಥಿತಿ

ಬದಲಾಗುತ್ತದೆಯೇ ಎಂಬುದು ಶ್ಯಾಮಸುಂದರರ ವಾದವಾಗಿತ್ತು. ಹೀಗೆ ಶ್ಯಾಮಸುಂದರರ ವಿಚಾರಗಳು ವೈಜ್ಞಾನಿಕವೂ ಮತ್ತು ವೈಚಾರಿಕವೂ ಆಗಿದ್ದವೆಂಬುದು ಕಂಡುಬರುತ್ತದೆ. ದಲಿತರು ಮೂಲ ಭಾರತೀಯರು ಎಂಬ ಶ್ಯಾಮಸುಂದರರ ವಿಚಾರವಾಗಲಿ ಮತ್ತು ಕೇವಲ ಧರ್ಮಾಂತರದಿಂದ ಸಾಮಾಜಿಕ ಪ್ರತಿಷ್ಠೆ ಮತ್ತು ಆರ್ಥಿಕ ಸ್ಥಿತಿ ಗತಿಗಳು ಸುಧಾರಿಸುತ್ತವೆಯೇ? ಎಂಬ ವಿಚಾರಗಳು ಚಿಂತನಾಯೋಗ್ಯವಾಗಿವೆ. ಇಂತಹ ಚಿಕ್ಕ ಪುಟ್ಟ ಭಿನ್ನಾಭಿಪ್ರಾಯಗಳು ಡಾ: ಅಂಬೇಡ್ಕರ್‌ರೊಂದಿಗೆ ಇದ್ದರೂ ಸಹಿತ, ಅವರ ಕಟ್ಟಾ ಅನುಯಾಯಿಗಳಾಗಿ ಶ್ಯಾಮಸುಂದರರು ಬದುಕಿ ಬಾಳಿದರು.

# ಹೈದ್ರಾಬಾದ ಕರ್ನಾಟಕದಲ್ಲಿ ದಲಿತೋದ್ಧಾರ

ರಾಜ್ಯದ ಇತರ ಭಾಗಗಳ ಮತ್ತು ಹೈದ್ರಾಬಾದ ಕರ್ನಾಟಕದ ದಲಿತರ ಜೀವನಕ್ಕೂ ಇರುವ ವ್ಯತ್ಯಾಸವನ್ನು ಸಹಜವಾಗಿ ಗುರುತಿಸಬಹುದು. ಈ ಭಾಗದ ದಲಿತರಲ್ಲಿನ ರಾಜಕೀಯ ಪ್ರಜ್ಞೆ, ಶೈಕ್ಷಣಿಕ ಪ್ರಗತಿ, ಸಾಮಾಜಿಕ ಮುನ್ನಡೆ ಮತ್ತು ಹೋರಾಟದ ಮನೋಭಾವ ರಾಜ್ಯದ ಇತರ ಭಾಗಗಳಲ್ಲಿ ಕಾಣಸಿಗದು. ಇಂತಹ ಕ್ರಾಂತಿಕಾರಕ ಬೆಳವಣಿಗೆ ಇಂದು ನಿನ್ನೆಯದಲ್ಲ. 12ನೇ ಶತಮಾನದಲ್ಲಿ ಬಸವಣ್ಣನವರ ಸಾಮಾಜಿಕ ಕ್ರಾಂತಿಯಿಂದ ಹಿಡಿದು, ದಾಸ ಪಂಥ, ಆ ನಂತರ ತತ್ವಪದಕಾರರು ತಮ್ಮದೇ ಆದ ರೀತಿಯಲ್ಲಿ ದಲಿತರ ಉದ್ಧಾರಕ್ಕೆ ಕೊಡುಗೆ ನೀಡಿದ್ದಾರೆ.

19ನೇ ಶತಮಾನದ ಆದಿಯಲ್ಲಿ, ದಲಿತ ಪರವಾದ ಚಿಂತನೆ ಮಹಾರಾಷ್ಟ್ರದಲ್ಲಿ ಜ್ಯೋತಿಭಾಫುಲೆ. ಶಾಹು ಮಹಾರಾಜರಿಂದ ಪ್ರಾರಂಭವಾಗಿ, ಡಾ: ಬಿ.ಆರ್.ಅಂಬೇಡ್ಕರ್‌ಅವರ ನೇತೃತ್ವದಲ್ಲಿ ಪೂರ್ಣ ಸ್ವರೂಪ ಪಡೆಯಿತು. ಡಾ: ಅಂಬೇಡ್ಕರ್‌ರ ಪ್ರಭಾವ ಹೈದ್ರಾಬಾದ ಕರ್ನಾಟಕದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಡಾ: ಅಂಬೇಡ್ಕರ್‌ರನ್ನು ಕುರಿತಾದ ಯಾವುದೇ ಕಾರ್ಯಕ್ರಮ, ಪ್ರತಿಭಟನೆಗಳು ಈ ಭಾಗದಲ್ಲಿ ಇಂದಿಗೂ ರೋಮಾಂಚನವುಂಟು ಮಾಡುವಂಥವಾಗಿವೆ. ಈ ಪ್ರದೇಶದ ದಲಿತರ ಖ್ಯಾತ ಚಿಂತಕರಾದ ಡಾ: ವ್ಹಿ.ಟಿ. ರಾಜಶೇಖರ ಅವರು ಬಿ. ಶ್ಯಾಮಸುಂದರ ಅವರ THEY BURN ಪುಸ್ತಕದ ಮುನ್ನುಡಿಯಲ್ಲಿ ಈ ಪ್ರದೇಶದ ಯಾವುದೇ ದಲಿತರನ್ನು ಮೇಲ್ಜಾತಿಯವರು ಅವಮಾನಿಸುವುದಾಗಲಿ, ಅಥವಾ ಅವಮಾನಿಸಲು ಯೋಚನೆ ಮಾಡುವ ಮುಂಚೆ ಎರಡೆರಡು ಬಾರಿ ವಿಚಾರ ಮಾಡಬೇಕಾಗುತ್ತದೆ ಎಂದಿದ್ದಾರೆ.

ಇವರೆಲ್ಲರೂ ಬೆಳಗಿಸಿದ ಜಾಗೃತಿಯ ದೀಪವನ್ನು ಇಂದಿನ ತಲೆಮಾರಿನವರೆಗೂ ಕೊಂಡೊಯ್ದವರು ಬಿ. ಶ್ಯಾಮಸುಂದರರು. 1946ರಲ್ಲಿ ಸಮ್ಮೇಳನ ನಡೆಸಿದ ಬಿ. ಶ್ಯಾಮಸುಂದರರು "ಬಿಟ್ಟಿ ಚಾಕ್ರಿ ಬಿಡಬೇಕು, ಸ್ವಾಭಿಮಾನದಿಂದ ಬದುಕಬೇಕು" ಎಂದು ದಲಿತರಲ್ಲಿ ಅರಿವು ಮೂಡಿಸಿದರು. ಹಿಂದೂ ದೇವತೆಗಳನ್ನು ಸುಡುವ ಚಳುವಳಿ ಮಾಡಿದರು. ದೇವಾಲಯಗಳ ಪ್ರವೇಶಕ್ಕಾಗಿ ಹೋರಾಟ ನಡೆಸಿ, ತಮ್ಮ ನೇತೃತ್ವದಲ್ಲಿ ಗುಲಬರ್ಗಾದ ಶರಣಬಸವೇಶ್ವರ ದೇವಾಲಯ ಪ್ರವೇಶಮಾಡಿದ್ದು ದಲಿತರಲ್ಲಿ ಧೈರ್ಯ ಮೂಡಿಸುವಲ್ಲಿ ಸಫಲವಾಯಿತು. ದಲಿತ ಯುವಕರು ಮೀಸೆ ಬೆಳೆಸಿಕೊಂಡು, ಕಾಲಲ್ಲಿ ಚಪ್ಪಲಿ ಧರಿಸಿಕೊಂಡು ಮತ್ತು ಕೈಯಲ್ಲಿ ಲಾಠಿಯೊಂದನ್ನು ಹಿಡಿದು ಸಮ್ಮೇಳನದಲ್ಲಿ ಭಾಗವಹಿಸುವಂತೆ ಹುರಿದುಂಬಿಸಿದ ಶ್ರೇಯಸ್ಸು ಬಿ. ಶ್ಯಾಮಸುಂದರರದು. ನಿಜಾಮ ಸರ್ಕಾರದ ಆಪ್ತರಾಗಿದ್ದುಕೊಂಡು ದಲಿತರ ಶೈಕ್ಷಣಿಕ ಅಭಿವೃದ್ಧಿಗಾಗಿ ಒಂದು ಕೋಟಿ ರೂಪಾಯಿಗಳನ್ನು ಬಿಡುಗಡೆಗೊಳಿಸಿ ವಿನಿಯೋಗಿಸಿದ ಕೀರ್ತಿ ಶ್ಯಾಮಸುಂದರರಿಗೆ ಸಲ್ಲುತ್ತದೆ. ಈ ರೀತಿಯಲ್ಲಿ ದಲಿತರ ಜನ ಮನ ಗೆದ್ದ ಶ್ಯಾಮಸುಂದರ ಅವರು 1954ರಲ್ಲಿ ಬೀದರ ಜಿಲ್ಲೆಯಲ್ಲಿ ಘಾಟ ಬೋರಾಳದಲ್ಲಿ ಡಾ: ಅಂಬೇಡ್ಕರ್‌ರವರ ಜೀವಿತಾವಧಿಯಲ್ಲಿಯೇ ನಡೆದ ಅವರ

ಜಯಂತಿ ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಭಾಗವಹಿಸಿದಾಗ, ಅವರ ಭಾಷಣ ಕೇಳಲು ದಲಿತರು, ಮುಸ್ಲಿಮರು ಹಳ್ಳಿ ಹಳ್ಳಿಯಿಂದ ಕಾಲ್ನಡಿಗೆಯಲ್ಲಿ ಬಂದು ಸೇರಿದ್ದು ಈಗ ಇತಿಹಾಸ.

1968ರಲ್ಲಿ ಗುಲಬರ್ಗಾದಲ್ಲಿ ದಲಿತರ ಆತ್ಮ ರಕ್ಷಣೆಗಾಗಿ ಭೀಮ ಸೇನೆಯ ಸಂಸ್ಥಾಪನೆ ದಲಿತರಲ್ಲಿ ಮತ್ತಷ್ಟು ಜಾಗೃತಿ ಮೂಡಿಸುವುದರೊಂದಿಗೆ ದಲಿತರ ಅಭ್ಯುದಯಕ್ಕೆ ಹೋರಾಟದ ಭಾವನೆಯನ್ನು ಇಮ್ಮಡಿಗೊಳಿಸಿತು.

ಅಂದು ದಲಿತ ಚಳುವಳಿ ಜೀವಂತವಾಗಿತ್ತು ಎಂಬುದಕ್ಕೆ ಶ್ಯಾಮಸುಂದರ ಮತ್ತು ಅವರ ಭೀಮ ಸೇನೆಯವರು ಎಂಬುದು ವಾಸ್ತವ ಸತ್ಯ. ಮಹಾರಾಷ್ಟ್ರದ ನಾಂದೇಡ ಮತ್ತು ಔರಂಗಾಬಾದ ಜಿಲ್ಲೆಗಳು ಹಾಗು ಹೈದ್ರಾಬಾದ ಕರ್ನಾಟಕ ಮೂರು ಜಿಲ್ಲೆಗಳ ದಲಿತ ಸಮುದಾಯದ ಜಾಗೃತ ಪ್ರಜ್ಞೆಗೆ ಬಿ. ಶ್ಯಾಮಸುಂದರ ಕಾರಣೀಭೂತರಾಗಿದ್ದಾರೆ ಎಂದರೆ ಅತಿಶಯೋಕ್ತಿಯೇನಲ್ಲ.

ಬಿ. ಶ್ಯಾಮಸುಂದರರು ತಮ್ಮ ಸ್ವಚ್ಛ ವ್ಯಕ್ತಿತ್ವ ಮತ್ತು ಧೀಮಂತಿಕೆಗಳಿಂದ ಈ ಭಾಗದ ಧೈರ್ಯವಂತ ದಲಿತ ನಾಯಕರ ಪಡೆಯನ್ನು ರಚಿಸಿದ್ದರು. ಅದರಿಂದಾಗಿ ಹೈದ್ರಾಬಾದ ಕರ್ನಾಟಕ ಭಾಗದ ದಲಿತ ಚಳುವಳಿಗೆ ತಾತ್ವಿಕ ನೆಲೆಗಟ್ಟು ದೊರೆತು, ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುವಂತಾಗಿದೆ.

ಇವೆಲ್ಲದರ ಫಲ ಈ ಭಾಗದ ದಲಿತರು ಶೈಕ್ಷಣಿಕವಾಗಿ, ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಮುಂದುವರೆಯಲು ಸಾಧ್ಯವಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು.

# ದಲಿತರ ಏಳ್ಗೆಗಾಗಿ ಭೀಮ ಸೇನೆ

**ಹಿನ್ನೆಲೆ :**

ಸ್ವಾತಂತ್ರ್ಯ ಪೂರ್ವದಲ್ಲಿ ಮತ್ತು ಸ್ವಾತಂತ್ರ್ಯಾನಂತರವೂ ದಲಿತರು ಸಾಮಾಜಿಕ ಅಸಮಾನತೆ, ಅನ್ಯಾಯ, ಶೋಷಣೆ ಮತ್ತು ಅಸ್ಪೃಶ್ಯತೆ ಮುಂತಾದವುಗಳನ್ನು ಅನುಭವಿಸುತ್ತಲೇ ಬಂದವರು. ಜೊತೆಗೆ ಇವುಗಳ ವಿರುದ್ಧ ಅವ್ಯಾಹತ ಹೋರಾಟವನ್ನು ಮುಂದುವರೆಸಿದ್ದರು. ಜ್ಯೋತಿಭಾ ಪುಲೆಯವರು ದಲಿತರ ಹೋರಾಟಕ್ಕೆ ಮತ್ತಷ್ಟು ಚಾಲನೆ ನೀಡಿದರು. ಡಾ|| ಬಿ. ಆರ್. ಅಂಬೇಡ್ಕರ್ ತಮ್ಮ ಘನ ವ್ಯಕ್ತಿತ್ವ ಮತ್ತು ನಾಯಕತ್ವದಲ್ಲಿ ದಲಿತರ ಹೋರಾಟಕ್ಕೆ ಒಂದು ಮೂರ್ತ ರೂಪ ನೀಡಿ ರಾಷ್ಟ್ರವ್ಯಾಪಿ ವಿಸ್ತಾರಗೊಳಿಸಿದರು. ಇದು ನಮ್ಮ ದೇಶದ ದಲಿತರ ಇತಿಹಾಸದ ಮೈಲಿಗಲ್ಲು ಆಗಿದ್ದು, ಇದರ ಸಾಮಾಜಿಕ ಪರಿಣಾಮ ಅಚ್ಚಳಿಯದೇ ಉಳಿಯಿತು. ಇವರಿಬ್ಬರ ಅನುಯಾಯಿಗಳು ದೇಶದ ಒಳ ಭಾಗಗಳಲ್ಲಿಯೂ ಈ ಕ್ರಾಂತಿಯ ಕಿಡಿಯನ್ನು ವಿಸ್ತರಿಸಿದರು.

ಭೀಮಸೇನೆಯ ಅಗತ್ಯತೆ :

**ಪ್ರತಿಕಾರ, ಹಿಂಸೆ, ಬಲತ್ಕಾರ ಮತ್ತು ಅನ್ಯಾಯ ಸಹಿಸದ ದಲಿತರು :**

ಡಾ|| ಅಂಬೇಂಡ್ಕರ್‌ರ ನೇತೃತ್ವದ ದಲಿತ ಚಳುವಳಿ ಅವರ ಮರಣದ ನಂತರ ಪ್ರಬಲವಾದ ನಾಯಕನಿಲ್ಲದಂತಾಯಿತು. ಜಾಗೃತಿಯಿಂದಾಗಿ ಎಚ್ಚೆತ್ತ ದಲಿತರು ಮುಂಚಿನಂತೆ ಸವರ್ಣೀಯರೊಂದಿಗೆ ವಿಧೇಯರಾಗಿ ಉಳಿಯಲಿಲ್ಲ. ಹಾಗಾಗಿ ಸವರ್ಣೀಯರ ಪ್ರತಿಕಾರ, ಹಿಂಸೆ, ಬಲತ್ಕಾರ ಮತ್ತು ಅನ್ಯಾಯಗಳನ್ನು ಎದುರಿಸಬೇಕಾಯಿತು. ಅಸ್ಪೃಶ್ಯತೆ ಮೊದಲಿನಂತೆಯೇ ಮುಂದುವರೆಯಿತು.

**ಭೂ ಸುಧಾರಣೆ ಜಾರಿಯ ವೈಫಲ್ಯ :**

ಬಡ ಜನರ ಮತ್ತು ಭೂ ರಹಿತರ ಸಾಮಾಜಿಕ ನ್ಯಾಯ ಮತ್ತು ಆರ್ಥಿಕ ಸಬಲಿಕರಣಕ್ಕಾಗಿ ಸ್ವಾತಂತ್ರ್ಯಾನಂತರ ಭಾರತ ಸರ್ಕಾರವು ಭೂಮಿ ನೀಡುವುದಾಗಿ ಘೋಷಿಸಿತ್ತು. ಆದರೆ ಭೂ ಸುಧಾರಣೆಯ ಜಾರಿಯು ನಿರೀಕ್ಷಿಸಿದ ಫಲ ನೀಡಲಿಲ್ಲ. ಇದರಿಂದಾಗಿ ತಮ್ಮ ಏಳ್ಗೆ ಮತ್ತು ಸಾಮಾಜಿಕ ನ್ಯಾಯಗಳು ದಲಿತರಿಗೆ ಕನಸಿನ ಮಾತಾಯಿತು.

**ರಾಜಕೀಯ ಪಕ್ಷಗಳಲ್ಲಿ ಇಚ್ಛಾಶಕ್ತಿಯ ಕೊರತೆ :**

ದಲಿತರ ಪ್ರಗತಿಗಾಗಿ ಶ್ರಮಿಸುವುದಾಗಿ ಮತ ಪಡೆದ ರಾಜಕೀಯ ಪಕ್ಷಗಳ ಭರವಸೆಗಳು ಕ್ರಾಂತಿಕಾರಕ ಬದಲಾವಣೆ ತರಲಿಲ್ಲ. ದಲಿತರ ಮೇಲೆ ದೌರ್ಜನ್ಯ, ಹಲ್ಲೆ ಮತ್ತು ದಮನಕಾರಿ ಪ್ರವೃತ್ತಿ ಮುಂದುವರೆಯಿತು. ಇಚ್ಛಾಶಕ್ತಿಯ ಕೊರತೆಯ ರಾಜಕೀಯ ಪಕ್ಷಗಳು ಚುನಾವಣೆಯಲ್ಲಿ ಮತ ಬ್ಯಾಂಕ್‌ಗಳನ್ನಾಗಿ ದಲಿತರನ್ನು ಬಳಸಿಕೊಂಡರು. ಹೀಗಾಗಿ ಉನ್ನತಿಗಾಗಿ ಪರ್ಯಾಯ ವ್ಯವಸ್ಥೆಯ ಅಗತ್ಯದ ಅನುಭವವಾಯಿತು.

## ಬದಲಾಗದ ಸವರ್ಣೀಯರು :

ಸಂವಿಧಾನಾತ್ಮಕ ರಕ್ಷಣೆ ಮತ್ತು ಬ್ರಿಟೀಷರ ಆಡಳಿತದಿಂದಾದ ಪಾಶ್ಚಾತ್ಯೀಕರಣದಿಂದಾಗಿ ದಲಿತರ ಬಗೆಗಿನ ಸವರ್ಣಿಯರ ದೃಷ್ಟಿಕೋನ ಬದಲಾಗಲಿಲ್ಲ. ದಲಿತರು ಉಳಿದವರಂತೆ ಬದುಕಲು ಕಾನೂನಿನ ರಕ್ಷಣೆಯಿದ್ದರೂ ಸಾಮಾಜಿಕ ಅನ್ಯಾಯ, ಶೋಷಣೆ ಮತ್ತು ಅಸ್ಪೃಷ್ಯತೆಗಳು ಮುಂದುವರೆದು ದಲಿತರಲ್ಲಿ ಬೇಸರ ಮೂಡಿಸಿದವು.

## ದಲಿತರ ದೌರ್ಬಲ್ಯಗಳು :

ಪ್ರಾಚೀನ ಕಾಲದಿಂದಲೂ ತುಳಿತಕ್ಕೊಳಗಾಗಿ ಸಾಮಾಜಿಕ ಮತ್ತು ಧಾರ್ಮಿಕ ಒತ್ತಡಗಳ ಪ್ರಭಾವದಿಂದ ಸ್ವಾತಂತ್ರ್ಯ ನಂತರವೂ ದಲಿತರು ಹೊರ ಬರಲಿಲ್ಲ. ಬದುಕಬೇಕೆಂದರೆ ಸೇವಕರಾಗಿ ದುಡಿಯಬೇಕು. ಅಥವಾ ಭಿಕ್ಷೆ ಬೇಡಬೇಕು. ಊರ ಹೊರಗಿದ್ದು ಹಳ್ಳಿಗಳಲ್ಲಿ ಭೂ ರಹಿತವಾಗಿರಬೇಕು. ನಗರಗಳಲ್ಲಿ ಕೂಲಿ ಕಾರ್ಮಿಕರಾಗಿರಬೇಕು ಎಂಬ ಭಾವನೆಯಿಂದ ನರಳಿದರು. ಶೋಷಣೆ ಮತ್ತು ಹಿಂಸೆಗಳನ್ನು ವಿರೋಧಿಸುವುದಕ್ಕಾಗಿ ಮತ್ತು ರಕ್ಷಣೆ ಹಾಗೂ ಪ್ರಗತಿಗಾಗಿ ಒಗ್ಗೂಡುವಿಕೆಯನ್ನು ಜಾತ್ಯಾಧಾರಿತ ರಾಜಕೀಯ ಮತ್ತು ಸ್ವಜಾತಿ ಪಕ್ಷಪಾತದಿಂದ (ತಮ್ಮವರನ್ನೇ ರಕ್ಷಣೆ ಮಾಡುತ್ತ) ಶೋಷಿತರು ನಿರ್ಲಕ್ಷ್ಯಕ್ಕೊಳಗಾಗಬೇಕಾಯಿತು. ದೇಶದ ರಕ್ಷಣಾ ಮತ್ತು ನ್ಯಾಯಾಂಗ ವ್ಯವಸ್ಥೆಯಲ್ಲಿ ಸವರ್ಣೀಯರು ಪ್ರಭುತ್ವ ಪಡೆದಿದ್ದರಿಂದ ದಲಿತರಿಗೆ ಸುಲಭವಾಗಿ ನ್ಯಾಯ ಸಿಗುವುದು ಕಷ್ಟವಾಯಿತು. ಇಂಥ ಸ್ಥಿತಿಯಿಂದ ಹೊರ ಬರಲು ದಲಿತರೆಲ್ಲರೂ ಶೈಕ್ಷಣಿಕವಾಗಿ, ಆರ್ಥಿಕವಾಗಿ ಸಬಲರಾಗದೇ ಉಳಿದಿದ್ದು ದಲಿತರ ದೌರ್ಬಲ್ಯಗಳಲ್ಲಿ ಪ್ರಮುಖವೆನಿಸುತ್ತದೆ.

## ದಲಿತ ಪ್ರತಿನಿಧಿಗಳ ನಿರ್ಲಕ್ಷ :

ಮೀಸಲು ಕ್ಷೇತ್ರಗಳಿಂದ ಆಯ್ಕೆಯಾಗುವ ದಲಿತ ನಾಯಕರು ದಲಿತರ ಆಶೋತ್ತರಗಳಿಗೆ ಸ್ಪಂದಿಸಲು ವಿಫಲರಾಗುತ್ತಾರೆ ಎಂಬ ಡಾ|| ಅಂಬೇಡ್ಕರ್‌ರ ಎಚ್ಚರಿಕೆ ನಿಜವಾಯಿತೆಂದೇ ಹೇಳಬಹುದಾಗುತ್ತದೆ. ದಲಿತ ಪ್ರತಿನಿಧಿಗಳು ಸವರ್ಣೀಯರಂತೆಯೇ ನಡೆದುಕೊಳ್ಳುತ್ತಾರೆ. ತಮ್ಮ ವೈಯುಕ್ತಿಕ ಪ್ರತಿಷ್ಠೆ ಮತ್ತು ಆಸ್ತಿ ಮುಂತಾದವನ್ನಷ್ಟೇ ನೋಡಿಕೊಳ್ಳುತ್ತಾರೆ. ಸ್ವಾರ್ಥ ರಾಜಕಾರಣ, ಸಾಮಾಜಿಕ ಕಳಕಳಿಯ ಕೊರತೆಗಳು, ದಲಿತ ಪ್ರತಿನಿಧಿಗಳಲ್ಲಿ ಸಹಜವೆನ್ನುವಂತಾಯಿತು. ಬಿ. ಶ್ಯಾಮಸುಂದರರ ಪ್ರಕಾರ ಕೆಲವೇ ಕೆಲವು ದಲಿತ ಪ್ರತಿನಿಧಿಗಳಿದ್ದು, ಅವರೂ ಸವರ್ಣಿಯರ ದಾಳಕ್ಕೆ ಬಲಿಯಾಗಿ ಇಡೀ ಸಮುದಾಯವನ್ನೇ ನಿರ್ಲಕ್ಷಿಸಲಾಗುತ್ತಿತ್ತಂತೆ. ಹೀಗಾಗಿ ದಲಿತ ಸಮುದಾಯ ತಮ್ಮ ಪ್ರತಿನಿಧಿಗಳಿಂದಲೇ ನಿರ್ಲಕ್ಷ್ಯಕ್ಕೊಳಗಾಗಬೇಕಾಯಿತು.

## ಭೀಮ ಸೇನೆಯ ರಚನೆಯ ಘೋಷಣೆ :

ದಲಿತರು ಒಗ್ಗಟ್ಟಾಗಿದ್ದುಕೊಂಡು ಸಾಮಾಜಿಕವಾಗಿ ಜಾಗೃತರಾದರೆ ಮಾತ್ರ ಆರ್ಥಿಕವಾಗಿ ಸಬಲರಾಗಿ ಅವರು ಸವರ್ಣೀಯರ ಹಿಡಿತದಿಂದ ಹೊರ ಬರಬಲ್ಲರು ಎಂಬುದು ಬಿ.

ಶ್ಯಾಮಸುಂದರರ ಅಭಿಪ್ರಾಯವಾಗಿತ್ತು. ಭಾರತದ ಮೂಲ ನಿವಾಸಿಗಳ ಪ್ರಗತಿಗಾಗಿ ಚಿಂತಿಸಿದ ಶ್ಯಾಮಸುಂದರರು ಸೇನೆಯೊಂದನ್ನು ಕಟ್ಟಿಕೊಂಡು ಹಿಂದುಳಿದವರನ್ನು ಪ್ರಗತಿಯತ್ತ ಒಯ್ಯಲು ನಿರ್ಧರಿಸಿದ್ದರು. ಇದಕ್ಕಾಗಿ ಸಮಾಜದ ಗಣ್ಯರನ್ನು, ಲೋಕಸಭಾ ಸದಸ್ಯರನ್ನು ಸಂಧಿಸಿ ಚರ್ಚಿಸಿದರು. ದಲಿತರ ಉನ್ನತಿಗಾಗಿ ಸಂಘಟನೆಯ ಮೂಲಕ ಪ್ರಗತಿಗಾಗಿ ಚಿಂತಿಸಿದ ಶ್ಯಾಮಸುಂದರರು ತಮ್ಮ ಸಂಘಟನೆಗೆ ಹೆಸರು ಕೊಡಲು ತವಕಿಸಿದರು.

ಗುಲಬರ್ಗಾದ ಭೀಮನಗರದಲ್ಲಿ ನಡೆದ ಡಾ॥ ಅಂಬೇಡ್ಕರ್‌ರ 69ನೆಯ ಜನ್ಮ ದಿನೋತ್ಸವದ ಸಂದರ್ಭದಲ್ಲಿ ಏರ್ಪಟ್ಟ ಸಮಾರಂಭದ ಮುಖ್ಯ ಅತಿಥಿಗಳಾಗಿ ಪಾಲ್ಗೊಂಡ ಶ್ಯಾಮಸುಂದರರು ಸಂಘಟನೆಯನ್ನು ಕಟ್ಟುವ ವಿಚಾರವನ್ನು ಘೋಷಿಸಿದರು. ಆ ಸಂಘಟನೆಗೆ **"ಭಾರತೀಯ ಭೀಮ ಸೇನೆ"** ಎಂದು ಹೇಳಿದಾಗ, ಅಲ್ಲಿ ಸೇರಿದ್ದ ಸಮುದಾಯದವರು ಭೀಮ ಸೇನೆಗೆ ಜಯವಾಗಲಿ ಎಂದು ಹರ್ಷೋದ್ಗಾರದೊಂದಿಗೆ ಚಪ್ಪಾಳೆ ತಟ್ಟಿ ಸ್ವಾಗತಿಸಿದರು. ಅಂದಿನ ಗುಲಬರ್ಗಾದ ಭೀಮ ಸೇನೆಯ ಘಟಕಕ್ಕೆ ಮೂರು ಸದಸ್ಯರ ಸಮಿತಿಯೊಂದನ್ನು ರಚಿಸಲಾಯಿತು. ಆ ಸಮಿತಿಯ ಅಧ್ಯಕ್ಷರಾದವರು ಅಂದಿನ ಯುವ ವಕೀಲರು ಮತ್ತು ಇಂದಿನ ಸಚಿವರು ಮತ್ತು ಕರ್ನಾಟಕ ಪ್ರದೇಶ ಕಾಂಗ್ರೆಸ್‌ನ ಅಧ್ಯಕ್ಷರಾಗಿರುವ ಶ್ರೀ ಮಲ್ಲಿಕಾರ್ಜುನ ಖರ್ಗೆಯವರು. ಮುಂದೆ ಖರ್ಗೆಯವರು ಕಾರಣಾಂತರದಿಂದ ಅಧ್ಯಕ್ಷ ಪದವಿನ್ನು ಬಿಟ್ಟುಕೊಟ್ಟರು.

ಶ್ಯಾಮಸುಂದರರು ಸ್ಥಾಪಿಸಿದ ಭೀಮ ಸೇನೆಯ ಸಂಘಟನೆಯ ಉದ್ದೇಶವು ದಲಿತರಲ್ಲಿ ಐಕ್ಯತೆ, ಸಮಗ್ರತೆ ಮತ್ತು ಜಾಗೃತಿಯನ್ನುಂಟು ಮಾಡುವ ಪ್ರಬಲ ಸೈನ್ಯವಾಗಿತ್ತು. ಭಾರತೀಯ ದಲಿತ ಚಳುವಳಿಯ ಪ್ರೇರಕ ಶಕ್ತಿ ನಾಯಕರಾಗಿದ್ದವರು ಡಾ॥ ಭೀಮರಾವ್ ಅಂಬೇಡ್ಕರ್ ಎಂಬುದು ಗಮನಾರ್ಹ ಸಂಗತಿ. ಹೈದ್ರಾಬಾದ್ ಪ್ರದೇಶದ ಮೂರು ರಾಜ್ಯಗಳ ಭೀಮ ಸೇನೆಯ ಸಂಸ್ಥಾಪಕ ಮತ್ತು ನೇತಾರ ಬಿ. ಶ್ಯಾಮಸುಂದರ ಅವರು, ಭಾರತವು ದಲಿತರ ದೇಶವೆಂದರು. ಮಹಾರಾಷ್ಟ್ರದಲ್ಲಿ ದಲಿತ್ ಪ್ಯಾಂಥರ್ ಚಳುವಳಿಗೆ ಸ್ಫೂರ್ತಿಯಾದದ್ದು ಈ ಭೀಮಸೇನೆ ಎಂಬುದೀಗ ಇತಿಹಾಸ. ಹೀಗೆ ಬಿ. ಶ್ಯಾಮಸುಂದರರು ದಲಿತ ಪ್ರಗತಿಗೆ ಸ್ಪಷ್ಟವಾದ ನೀತಿ ಸಂಹಿತೆಯನ್ನು ಪಾಲಿಸುವ ಇಂದು ವೇದಿಕೆಯನ್ನೊದಗಿಸಿದರು.

ಸ್ವಾಭಿಮಾನದ ಪ್ರತಿರೂಪ ಭೀಮಸೇನೆ. ಸ್ವಾವಲಂಬನೆ ಬೆಳೆಸಿಕೊಳ್ಳಲು ದಲಿತರಿಗೆ ಅದು ಕರೆ ಕೊಟ್ಟಿದೆ. ಊಳಿಗಮಾನ ಪದ್ಧತಿಯ, ಜಾತಿಯ ಇಲ್ಲವೇ ಭಾಷಾವಾರು ಸಂಘಟನೆಯಲ್ಲ. ಬದಲಾಗಿ ಸತ್ಯ-ಅಹಿಂಸೆ ಆಧರಿಸಿದ ಅಖಿಲ ಭಾರತ ಸಂಘಟನೆ. ಅದರ ಪ್ರಕಾರ ಭಾರತವು ಎಲ್ಲರಿಗೂ ಸೇರಿದ್ದು. ಇಲ್ಲಿ ಎಲ್ಲರೂ ಆದರಲ್ಲೂ, ದಲಿತರು ಅಧಿಕಾರ ಹಂಚಿಕೊಳ್ಳಬೇಕು. ದಾಸ್ಯ ಬೇಡ, ಅಸ್ಪೃಷ್ಯತೆ ನಿಷೇಧ ಹಾಗೂ ಸ್ವಾವಲಂಬನೆ ಈ ಭೀಮಸೇನೆಯ ತತ್ವಗಳು. ಅದೊಂದು ಅರೆಸೈನಿಕ ಸಂಘಟನೆಯಾಗಿದ್ದು ರಾಷ್ಟ್ರೀಯ ಐಕ್ಯತೆಗಾಗಿ ದುಡಿಯುವುದಾಗಿದೆ.

## ಭಾರತೀಯ ಭೀಮ ಸೇನೆಯ ಧ್ಯೇಯೋದ್ದೇಶಗಳು :

ಸಂವಿಧಾನ : ಭೀಮ ಸೇನೆಯು ಜಿಲ್ಲಾವಾರು ತಳಹದಿಯ ಮೇಲೆ ಬೆಳೆಯಬೇಕು. ಅದರ ಜಿಲ್ಲಾ ಘಟಕದ ಉದ್ಘಾಟನೆಯು ಜಿಲ್ಲಾ ಕೇಂದ್ರ ಸ್ಥಳದಲ್ಲಿ ನಡೆಯಬೇಕು. ಅದಕ್ಕೆ ತಾಲೂಕು ಘಟಕದ ಎಲ್ಲ ಸದಸ್ಯರು ಹಾಜರಾಗಬೇಕು. ಜಿಲ್ಲಾ ಘಟಕಗಳ ಅಧ್ಯಕ್ಷರನ್ನು ಕೇಂದ್ರ ಅಧ್ಯಕ್ಷರು ನೇಮಿಸುತ್ತಾರೆ. ಇದೇ ರೀತಿ ತಾಲೂಕಾ ಘಟಕಗಳ ರಚನೆಯೂ ನಡೆಯುವುದು. ಅಲ್ಲದೇ ಈ ಸಂಘಟನೆ ಪ್ರತಿ ಹಳ್ಳಿ–ಹಳ್ಳಿಗಳಲ್ಲಿಯೂ ಪ್ರಾರಂಭಿಸುವುದು.

ಭೀಮ ಸೇನೆಯ ಧ್ವಜ : ಭೀಮ ಸೇನೆಯ ಧ್ವಜವು ನೀಲಿ ಬಣ್ಣದ್ದಿರಬೇಕು. ಅದರ ಕೇಂದ್ರದಲ್ಲಿ ನೇಗಿಲು, ಸುತ್ತಿಗೆ ಹಾಗೂ ಬಾಣಗಳ ಚಿತ್ರಗಳಿದ್ದು, ಅವು ಕೂಲಿಕಾರರನ್ನು ಪ್ರತಿನಿಧಿಸುತ್ತವೆ. ದಲಿತರು ಆಹಾರ ಉತ್ಪಾದಕರೆಂದು, ಸುತ್ತಿಗೆ ಔದ್ಯೋಗಿಕ ಕೆಲಸಗಾರರೆಂದು ಹಾಗೂ ಬಾಣವು ಅವರು ಈ ದೇಶವನ್ನು ಆಳಿದ ಮೂಲನಿವಾಸಿಗಳೆಂದು ಸೂಚಿಸುತ್ತದೆ.

**ಮೂಲ ಭಾರತೀಯರ ಸಂಘಟನೆ:** ಭೀಮ ಸೇನೆಯು ದಲಿತರನ್ನು ಪ್ರತಿನಿಧಿಸುತ್ತದೆ. ಜಿಲ್ಲಾ ಭೀಮ ಸೇನೆಯ ಘಟಕವು ಅಲ್ಲಿಯ ಕನಿಷ್ಠ ಹತ್ತು ಜನ ಪುರುಷರನ್ನು ಪಟ್ಟಿ ಮಾಡುತ್ತದೆ. ಅವರು 15 ರಿಂದ 55 ವರ್ಷದ ಒಳಗಿನವರಿರಬೇಕು. ಆದರೆ ನಾಯಕರಿಗೆ ಹಾಗೂ ವ್ಯವಸ್ಥಾಪಕರಿಗೆ ವಯಸ್ಸಿನ ಮಿತಿ ಇಲ್ಲ.

**ಸ್ವ ರಕ್ಷಣೆಯೇ ಮುಖ್ಯ ಉದ್ದೇಶ :** ಭೀಮ ಸೇನೆಯ ಎಲ್ಲ ಸದಸ್ಯರು ಗುಂಪಗಳಲ್ಲಿ ಚಲಿಸುತ್ತ ಪ್ರತಿ ಮುಂಜಾನೆ ನಿವೃತ್ತ ಸೈನಿಕನೊಬ್ಬನ ಮಾರ್ಗದರ್ಶನದಡಿಯಲ್ಲಿ ಪರೇಡ್ ಮಾಡಬೇಕು.

**ಸಂದರ್ಶನಗಳ ವಿನಿಮಯ :** ತಿಂಗಳಿಗೆ ಪ್ರತಿ ಮೊದಲನೆಯ ರವಿವಾರದಂದು ಜಿಲ್ಲಾ ಘಟಕದವರು ತಾಲೂಕಾ ಘಟಕದವರೊಂದಿಗೆ ಭೇಟಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕು. ಅಂದಿನ ಸಂಜೆ ದಲಿತ ಕಾರ್ಯಕರ್ತರ ಸಭೆ ನಡೆಸಿ ಸಮಸ್ಯೆಗಳನ್ನು ತಿಳಿದುಕೊಳ್ಳಬೇಕು.

**ಚಿಕಿತ್ಸಕ ಭಾವನೆ :** ಭೀಮ ಸೇನೆಯ ನೇತೃತ್ವದಲ್ಲಿ ಕೃಷಿ ಕೂಲಿಕಾರರು, ಔದ್ಯೋಗಿಕ ಕೆಲಸಗಾರರು, ವಾಣಿಜ್ಯ ಕೆಲಸಗಾರರು, ಹಾಗೂ ಇತರರು ಸಂಘಟನೆಗೊಳ್ಳಬೇಕು. ಭೀಮ ಸೇನೆಯು ಇವರೆಲ್ಲರನ್ನು ನಿಯಂತ್ರಿಸಬೇಕು.

**ಸಂದಿಗ್ಧ ಪ್ರಸಂಗಗಳಲ್ಲಿ ನೆರವು :** ಸವರ್ಣೀಯರು ದಲಿತರನ್ನು ತಮ್ಮ ಹದ್ದುಬಸ್ತಿನಲ್ಲಿ ಇಟ್ಟುಕೊಳ್ಳಲು ದಲಿತರ ವಿರುದ್ಧ ಆರ್ಥಿಕ ನಿಷೇಧಗಳನ್ನು ಹೇರಬಹುದು. ಅಂತಹ ಸಂಧರ್ಭಗಳಲ್ಲಿ ಭೀಮಸೇನೆಯು ತನ್ನ ನೆರೆಯ ಸಮುದಾಯಗಳಗೆ ರಕ್ಷಣೆ ಹಾಗೂ ಸಹಾಯ ನೀಡಬೇಕು. ಈ ಘಟನೆಗಳನ್ನು ಕೇಂದ್ರ ಕಛೇರಿಗಳಿಗೆ ತಿಳಿಸಬೇಕು. ಅದನ್ನು ಜಿಲ್ಲಾಧಿಕಾರಿಗಳು ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿಗಳು ಮುಂತಾದವರ ಗಮನಕ್ಕೆ ತರಬೇಕು. ಇದಕ್ಕಾಗಿ ವೈಯುಕ್ತಿಕ ಭೇಟಿಯನ್ನು ಮಾಡಬಹುದು.

**ಭೀಮ ಸೇನೆಯ ಮಹತ್ವದ ಚಟುವಟಿಕೆಗಳು :**

1. ಜಿಲ್ಲಾ ಗುಪ್ತದಳದ ಸೇವೆಯನ್ನು ವ್ಯವಸ್ಥಿತಗೊಳಿಸಬೇಕು. ನಮಗೆ ಗೊತ್ತಿರುವಂತೆ ದಲಿತ ವಿರೋಧಿ ಚಟುವಟಿಕೆಗಳು ಸದಾ ನಡೆಯುವುದರಿಂದ, ನುರಿತ ಗಟ್ಟಿ ವ್ಯಕ್ತಿಗಳು ಈ ದಳದಲ್ಲಿರಬೇಕು.
2. ಸವರ್ಣೀಯರು ದಲಿತರ ಮೇಲೆ ಹಲ್ಲೆ ನಡೆಸಿ, ಗಾಯ ಮಾಡಿದರೆ ಅಂತವರನ್ನು ರಕ್ಷಿಸಲು ನಮ್ಮ ಕೆಲವರಿಗೆ ತರಬೇತಿ ನೀಡಬೇಕು.
3. ಸಾಕ್ಷರತಾ ಶಿಕ್ಷಣ ಗುಂಪುಗಳ ನಮ್ಮ ಜನರಿಗೆ ಬೌದ್ಧಿಕ, ಆರ್ಥಿಕ ಹಾಗು ಸಾಂಸ್ಕೃತಿಕ ಸಿರಿಯ ಬಗ್ಗೆ ತಿಳಿಸಬೇಕು. ಉದಾಹರಣೆಗೆ ನಮ್ಮ ಜನರಿಗೆ ಚುನಾವಣೆಯ ಬಗ್ಗೆ ಜ್ಞಾನ ಇರುವುದಿಲ್ಲ. ಆ ಕುರಿತು ಮನವರಿಕೆ ಮಾಡಿಕೊಡುವುದು.
4. ನಮ್ಮ ಜನರಿಗೆ ಪೋಲಿಸ್ ಹಾಗೂ ಕಾನೂನಿನ ನೀತಿ–ನಿಯಮಗಳನ್ನು ತಿಳಿಸಲು ಕಾನೂನು ನೆರವು ಸಮಿತಿಯನ್ನು ಹೊಂದಬೇಕು.
5. ಭೀಮಸೇನೆಯು ಕ್ಯಾಮರಾಗಳನ್ನು ಹೊಂದಿ ದಲಿತ ವಿರೋಧಿ ಚಟುವಟಿಕೆಗಳನ್ನು ಬಹಿರಂಗಗೊಳಿಸಬೇಕು.
6. ದಲಿತರು ತಾವು ಭಾರತದ ಮೂಲ ನಿವಾಸಿಗಳು, ನಾವು ಹಿಂದುಗಳಲ್ಲ, ಸವರ್ಣೀಯರ ದೇವರು ಮಿಥ್ಯ ಉಳಿದದ್ದೆಲ್ಲ ಸತ್ಯ ಎಂದು ಅರಿಯಬೇಕು. ಭಗವಾನ್ ಬುದ್ಧ ಈ ಸತ್ಯವನ್ನು ತಿಳಿಸಿ ಅವರಿಗೆ ಜ್ಞಾನ ದೀಕ್ಷೆಯನ್ನು ನೀಡಿದನು.
7. ಸವರ್ಣೀಯರು ದಲಿತರ ಆಸ್ತಿ–ಪಾಸ್ತಿಗೆ ಹಾನಿಗೊಳಿಸುವ ಸಂದರ್ಭಗಳಲ್ಲಿ ಭೀಮಸೇನಾ ಕಾರ್ಯಕರ್ತರು ರಕ್ಷಣೆ ಒದಗಿಸಬೇಕು.
8. ಸವರ್ಣೀಯರಿಗೆ ಪೋಲಿಸ್ ರಕ್ಷಣೆ ಇದೆ. ಆದ್ದರಿಂದ ಪೋಲಿಸರ ಅನೀತಿ ರಕ್ಷಣೆಯನ್ನು ಕ್ಷೀಣಗೊಳಿಸಲು ನಮ್ಮ ಸೇನೆಯ ಜಿಲ್ಲಾ ಸಂಖ್ಯೆ ನಮ್ಮ ವೈರಿಗಳ ಎರಡು ಪಟ್ಟು ಇರುವುದು ಹಿತಕರ.
9. ಜೈಲುಗಳಲ್ಲಿ ದಲಿತರೇ ಕಸ ಗುಡಿಸುವುದು ನ್ಯಾಯವೇ ? ಇದನ್ನು ಪ್ರತಿಭಟಿಸಬೇಕು.

**ಭೀಮಸೇನೆಯು ತಲುಪಬೇಕಾದ ಅಂತಿಮ ಗುರಿಗಳು :**

**1.** ಪ್ರತ್ಯೇಕ ನೆಲೆ : ನಮ್ಮ ದೇಶದ ಪ್ರತಿಶತ 30ರಷ್ಟು ಹಳ್ಳಿಗಳನ್ನು ನಮ್ಮ ನೇತಾರರ ಮಾರ್ಗದರ್ಶನದಲ್ಲಿ ಸವರ್ಣೀಯರು ಅವುಗಳನ್ನು ದಲಿತರಿಗೆ ಒಪ್ಪಿಸಬೇಕು.

**2. ಪ್ರತ್ಯೇಕ ವಿಶ್ವವಿದ್ಯಾಲಯ** : ಅಂಬೇಡ್ಕರ್‌ರವರು ಸ್ಥಾಪಿಸಿದ ಜನತಾ ಶಿಕ್ಷಣ ಸಂಸ್ಥೆಯು ಡಾ॥ ಅಂಬೇಡ್ಕರ್ ವಿಶ್ವವಿದ್ಯಾಲಯವಾಗಿ, ನಮ್ಮ ಕಾಲೇಜುಗಳೆಲ್ಲ ಅದಕ್ಕೆ ಸಂಲಗ್ನವಾಗಬೇಕು.

**3. ಪ್ರತ್ಯೇಕ ಚುನಾವಣಾ ವ್ಯವಸ್ಥೆ** : ನಮ್ಮ ದಲಿತ ಪ್ರತಿನಿಧಿಗಳನ್ನು ಆರಿಸುವ ಹಕ್ಕನ್ನು ಪಡೆದಿದ್ದೇವೆ. ನಮ್ಮ ಈ ಹಕ್ಕನ್ನು ಸಂವಿಧಾನ ಹಾಗು ಚುನಾವಣಾ ಆಯೋಗಗಳು ಕಸಿದುಕೊಂಡಿದ್ದು, ಅಲ್ಲೆಲ್ಲ ಸವರ್ಣೀಯರಿಗೆ ಹೆಚ್ಚಿನ ಶಕ್ತಿಯನ್ನು ನೀಡಿವೆ. ಇದರಿಂದಾಗಿ ಚುನಾವಣೆಗಳು ನಾಟಕಗಳಂತಾಗಿವೆ. ಚುನಾವಣೆಗಳು ಸವರ್ಣೀಯರ ಕೈಗೊಂಬೆಗಳಾಗಿ ಮಾರ್ಪಟ್ಟಿವೆ. ಭಾರತದ ಮಾದರಿಯ ಪ್ರಜಾಪ್ರಭುತ್ವವು ಲಂಚಬಡಕ ರಾಜಕಾರಣಿಗಳಿಗೆಲ್ಲಾ ಅನುಕೂಲವಾಗಿದೆ. ಇದರಿಂದಾಗಿ ಪಾಶ್ಚಾತ್ಯ ಜಗತ್ತಿಗೆ ನಾವು ನಮ್ಮ ಜಾತ್ಯತೀತತೆಯ ಬಗ್ಗೆ ನಂಬಿಸಲಾರೆವು.

**4. ನಾವು ಹಿಂದುಗಳಲ್ಲ** : ದಲಿತರಲ್ಲದೆ ಹಿಂದು ಧರ್ಮ ಪರಿಪೂರ್ಣವಾಗದೋ ಏನೋ? ಹಿಂದುಗಳು ದಲಿರತನ್ನು ತಮ್ಮ ಪಾಳಯಕ್ಕೆ ಆಕರ್ಷಿಸುತ್ತಿದ್ದಾರೆ. ಗಾಂಧೀಯವರು ಈ ಕೆಲಸ ಮಾಡಿದರು. ಅಂಬೇಡ್ಕರರು ನಮ್ಮನ್ನು ಅದರಿಂದ ಪಾರು ಮಾಡಿದರು. ಸವರ್ಣೀಯರು ನಮ್ಮ ಪ್ರಗತಿಯ ಹೆಸರಿನಲ್ಲಿ ವಿದೇಶಿ ಸಹಾಯಧನ ಪಡೆದು ಶ್ರೀಮಂತರಾಗುತ್ತಿದ್ದಾರೆ. ಇದೆಲ್ಲ ಕೊನೆಗೊಳ್ಳಬೇಕು. ಮೂಲ ನಿವಾಸಿಗಳಾದ ನಾವು ಹಿಂದು ಧರ್ಮದಿಂದ ಹೊರ ಬಂದು ಬೌದ್ಧ ಧರ್ಮವನ್ನು ಅನುಸರಿಸಬೇಕು.

**5. ಸದಸ್ಯತ್ವ** : ಭೀಮಸೇನೆಗೆ ಸದಸ್ಯರಾಗಲು ಕನಿಷ್ಠ 18 ವರ್ಷದವರಾಗಿರಬೇಕು. ಪ್ರತಿ ಸದಸ್ಯನು ಮಾಸಿಕ 10 ಪೈಸೆಯ ಫೀ ನೀಡಬೇಕು. ಆಂಧ್ರದಲ್ಲಿ 10 ಸಾವಿರ ಸದಸ್ಯರಿದ್ದಾರೆ. ಭೀಮ ಸೇನೆಯ ಒಟ್ಟು ಸದಸ್ಯರು 2 ಲಕ್ಷ. ಅವರಿಗೆ ಎಕ್ಸ್ ಸರ್ವೀಸ್‌ಮೆನ್‌ರಿಂದ ಸೈನಿಕ ತರಬೇತಿಯನ್ನು ನೀಡಲಾಗಿದೆ. 18 ವರ್ಷದ ಒಳಗಿನ ಮಕ್ಕಳಿಗೆ ಪ್ರತ್ಯೇಕ ಘಟಕ ಇದೆ.

**6. ಕಾರ್ಯಕ್ರಮಗಳು** : ಅಸ್ಪೃಶ್ಯರು ಹಿಂದುಗಳಲ್ಲ. ಅವರಿಗೂ ಹಿಂದು ಧರ್ಮ-ಶಾಸ್ತ್ರಗಳಿಗೂ ಏನೂ ಸಂಬಂಧವಿಲ್ಲ. ಅವರ ಸಂಖ್ಯೆ ಈಗ 16 ಕೋಟಿ. ಅವರು ಭಾರತದ ಮೂಲ ನಿವಾಸಿಗಳು. ಅವರಿಗೆ ಕ್ರೌರ್ಯ ಕಂಡರೆ ಆಗದು. ಅಂಬೇಡ್ಕರರು ಸಮತಾ ಸೈನಿಕ ದಳದೊಂದಿಗೆ ನ್ಯಾಯಕ್ಕಾಗಿ ಹೋರಾಡಿದರೆ ನಾವು ಭೀಮ ಸೇನೆಯ ಮೂಲಕ ನ್ಯಾಯಕ್ಕಾಗಿ ಹೋರಾಡುತ್ತೇವೆ.

## ಈ ಸಚಿವರನ್ನು ಯಾರು ಕೇರ್ ಮಾಡುತ್ತಾರೆ?

**ಶ್ರೀ ಬಿ. ಶ್ಯಾಮಸುಂದರ್ (ಭಾಲ್ಕಿ):-** ಈ ಅಧಿವೇಶನಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ ಬಜೆಟ್ ಎಂದು ಹೇಳಲಾದ ನಮಗೆ ಒದಗಿಸಿರುವ ಪುಸ್ತಕಗಳಲ್ಲಿರುವ ಅಂಕಿಗಳು, ಈ ಅಂಕಿಗಳ ಬಗ್ಗೆ ವ್ಯವಹರಿಸುವರೆಂದು ಹೇಳಲಾದ ಮೈಸೂರಿನ ಪ್ರಮುಖ ಸಚಿವರು ದುರದೃಷ್ಟವಶಾತ್ ಈಗ ಗೈರು ಹಾಜರಾಗಿದ್ದಾರೆ. ಇದಕ್ಕಾಗಿ ನಾನು ವಿಷಾದಿಸುತ್ತೇನೆ.

ಈ ವಿಷಯದ ಬಗ್ಗೆ ವ್ಯವಹರಿಸುವುದಕ್ಕೆ ಮೊದಲು, ಮಾನ್ಯರೆ, ಸಂಪ್ರದಾಯಗಳಿಗೆ ಸಂಬಂಧಪಟ್ಟಂತೆ ಹೇಳುವುದಾದರೆ, ಉತ್ತಮ ಸಂಪ್ರದಾಯಗಳನ್ನು ಅಂಗೀಕರಿಸುವಲ್ಲಿ ನಾವು ವಿಫಲರಾಗಿದ್ದೇವೆ. ಕಳೆದ ಸಲ ಅವಿಶ್ವಾಸ ನಿರ್ಣಯವನ್ನು ಮಂಡಿಸಿದ ಸಮಯದಲ್ಲಿ ನಾವು ಸದನವನ್ನು ತ್ಯಜಿಸಿದ್ದು ಮತ್ತು ಸಚಿವರ ಭಾಷಣ ಕೇಳಬಾರದೆಂದಲ್ಲ, ಆದರೆ ಅವರಿಗೆ ನಾವು ಉತ್ತರಿಸುವ ಮೊದಲು ಅವರ ಉತ್ತರಗಳು ಏನೆಂದು ನಾವು ತಿಳಿಯಬೇಕಾಗಿತ್ತು. ಆರೋಗ್ಯಕರ ಸಂಪ್ರದಾಯಗಳನ್ನು ಐತಿಹಾಸಿಕ ಘಟನೆಗಳ ಆಧಾರದ ಮೇಲೆ ಸೃಜಿಸಲಾಗಿದೆ. ಒಂದು ಪ್ರಸ್ತಾವ ಮತ್ತೊಂದು ಪ್ರಸ್ತಾವದಂತಿರುವುದಿಲ್ಲ. ಕಾನೂನು ಭಾಷೆಯಲ್ಲಿ ಎಲ್ಲಾ ಪ್ರಸ್ತಾವಗಳು ಒಂದೇ ರೀತಿಯಾಗಿರುತ್ತವೆ, ಆದರೆ ಕೆಲವು ಪ್ರಸ್ತಾವಗಳು ಅವುಗಳದೇ ಆದ ಮಹತ್ವವನ್ನು ಹೊಂದಿರುತ್ತವೆ ಮತ್ತು ಈ ದೃಷ್ಟಿಯಿಂದ ಮೊದಲು ನಮಗೆ ಉತ್ತರಿಸಬೇಕಾದ್ದು ಮತ್ತು ಅವಕಾಶ ನೀಡಬೇಕಾಗಿರುವುದು ಸರ್ಕಾರದ ಅಥವಾ ಅಧಿಕಾರದಲ್ಲಿರುವ ಪಕ್ಷದ ಕರ್ತವ್ಯವಾಗಿರುತ್ತದೆ. ಮಾನ್ಯರೆ ಇದೊಂದು ಉತ್ತಮ ಸಂಪ್ರದಾಯ/ ನಡವಳಿಕೆಯಾಗುತ್ತದೆ.

**ಮಾನ್ಯ ಉಪ ಸಭಾಧ್ಯಕ್ಷರು:-** ಇದು ಮುಗಿದಿದೆ, ಅದನ್ನು ಈಗ ಅವರು ಏಕೆ ಉಲ್ಲೇಖಿಸುತ್ತಿದ್ದಾರೆ?

**ಶ್ರೀ ಬಿ. ಶ್ಯಾಮಸುಂದರ್:-** ಹೌದು ಸ್ವಾಮಿ, ಎಲ್ಲವು ಮುಗಿದುಹೋಗಿದೆ. ಮುಗಿದುಹೋಗಿರುವ ವಿಷಯದ ಬಗ್ಗೆ ನಾವು ಚಿಂತಿಸಬೇಕಾಗಿರುವುದಿಲ್ಲ. ಅದು ಮತ್ತೊಂದು ರೀತಿಯಲ್ಲಿ ಕಂಡುಬಂದುದರಿಂದ ನಾನು ಅದನ್ನು ಮತ್ತೆ ಹೇಳಬೇಕಾಗಿದೆ. ಅವರು ಇಲ್ಲಿ ಉತ್ತರಿಸಿದಾಗ ಅದು ಷೇಕ್ಸ್‌ಪಿಯರ್‌ನ ನಾಟಕಗಳನ್ನು ಆಡಿದಂತಿತ್ತು. ಪ್ರತಿಯೊಬ್ಬ ಸಚಿವರು ಪ್ರೇಕ್ಷಕರಿಲ್ಲದ ನಟರಂತೆ ನಟಿಸಿದ್ದಾರೆ. ಕೆಲವರು ಪೋರ್ಷಿಯಾಳಂತೆ, ಕೆಲವರು ಶೈಲಾಕ್‌ನಂತೆ, ಮತ್ತೆ ಕೆಲವರು ಆಂಟೋನಿಯೋನಂತೆ ನಟಿಸಿದ್ದಾರೆ; ಆದರೆ ಪ್ರೇಕ್ಷಕರೇ ಇಲ್ಲ! ಭಾಷಣವು ವಿಷಯ ವ್ಯಾಪ್ತವಾಗಬಹುದಾದಷ್ಟು ಸುದೀರ್ಘವಾಗಿತ್ತು ಮತ್ತು ಆಸಕ್ತಿ ಕೆರಳಿಸುವಷ್ಟರ ಮಟ್ಟಿಗೆ ಸಂಕ್ಷಿಪ್ತವಾಗಿರಬೇಕಾಗಿತ್ತು. ಆದರೆ ಯಾವುದೇ ಆಸಕ್ತಿ ಮೂಡಿಸದೇ ನಮ್ಮ ಸಚಿವರು ವಾಸ್ತವವಾಗಿ

ಡೆನ್ಮಾರ್ಕ್‌ನ ರಾಜಕುಮಾರನಿಲ್ಲದೆ ಹ್ಯಾಮ್ಲೆಟ್ ನಾಟಕವನ್ನು ಅಭಿನಯಿಸಿದಂತಿತ್ತು ಎಂಬುದೇ ನನಗೆ ಸೋಜಿಗವನ್ನುಂಟುಮಾಡಿದೆ. ಅವರು ಎಲ್ಲವನ್ನು ಅವರ ಅಧಿಕಾರದಿಂದ ಮಾಡಿರುತ್ತಾರೆ. ಸ್ವಗತ ರೂಪದಲ್ಲಿ ಅವರು ನಮ್ಮನ್ನು ನಿಂದಿಸಿರುತ್ತಾರೆ, ನಮ್ಮನ್ನು ಅಲಕ್ಷ್ಯಮಾಡಿದ್ದಾರೆ. 'ಈ ಹೇಡಿಗಳೆಲ್ಲಿ' ಎಂದು ಹೇಳಿದ್ದಾರೆ. ಇದೆಲ್ಲಾ ನಡೆದಿರುವುದು ದುರದೃಷ್ಟಕರ. ನಮ್ಮ ಸ್ನೇಹಿತರಿಂದ ಇದನ್ನು ನಾವು ನಿರೀಕ್ಷಿಸಿರಲಿಲ್ಲ. ಇದು ನಮ್ಮ ಚುನಾವಣಾ ತಂತ್ರವೆಂದು ಅವರು ಹೇಳಿದ್ದಾರೆ. ನಾನು ತುಂಬಾ ವಿಷಾಧಿಸುತ್ತೇನೆ. ಇದು ಚುನಾವಣಾ ತಂತ್ರವಲ್ಲ. ಹಿಂದೆ ನಮಗನ್ನಿಸಿದ್ದು ಏನಂದ್ರೆ _ ಈ ಸ್ನೇಹಿತರು ತಮ್ಮ ಯುಕ್ತಾಯುಕ್ತ ವಿವೇಚನೆಯಿಂದ ನಡೆದುಕೊಳ್ಳುತ್ತಾರೆಂದು ನಾವು ಭಾವಿಸಿದ್ದೆವು. ಆದರೆ ಅವರು ಬೇರೊಂದು ರೀತಿಯಲ್ಲಿ ಆಲೋಚಿಸಿರುತ್ತಾರೆ. ಆದುದರಿಂದ ನಾವು ಅದನ್ನು ಹೇಳಲೇಬೇಕಾಗಿದೆ. ಇಲ್ಲವಾದಲ್ಲಿ ಅದನ್ನು ಹೇಳುವ ಅವಶ್ಯಕತೆಯೇ ಇರುತ್ತಿರಲಿಲ್ಲ. ಅವರ ಪರವಾಗಿ 150 ಸ್ನೇಹಿತರಿದ್ದು ಅವರು ಅವರ ಬೆಂಬಲಕ್ಕಾಗಿ ಮತ ನೀಡುವರೆಂದು ನಮಗೆ ಚೆನ್ನಾಗಿ ಗೊತ್ತಿತ್ತು.

ಮಾನ್ಯರೆ, ಈ ದೇಶದ ವಾಸ್ತವಿಕ ಪರಿಸ್ಥಿತಿಯನ್ನು ಗಮನಿಸೋಣ, ಆಯವ್ಯಯದ ಈ ವಿಷಯವನ್ನು ಚರ್ಚಿಸುವುದಕ್ಕೆ ಮೊದಲು ಎರಡು ಕೋಟಿಗಿಂತ ಹೆಚ್ಚು ಜನರ ಅದೃಷ್ಟವನ್ನು ಈಗ ಇಲ್ಲಿ ರೂಪಿಸುತ್ತಿರುವ ನಮ್ಮ ಸಚಿವರ ಮಾನಸಿಕ ಸ್ಥಿತಿಯನ್ನು ನಿಮಗೆ ವಿವರಿಸುವುದು ನನಗೆ ಸರಿಯೆನಿಸುತ್ತಿದೆ. ಸ್ವಾಮಿ ನಾನು ಎರಡು ದಿವಸಗಳ ಹಿಂದೆ ಈ ಸಚಿವರ ಮನೋಭಾವ – ಅವರು ಹೇಗೆ ವಿಫಲರಾಗಿದ್ದಾರೆ ಎಂಬುದರ ಬಗ್ಗೆ ನಾನೊಂದು ಸಣ್ಣ ಕವಿತೆಯನ್ನು ರಚಿಸಿದ್ದೇನೆ. ನಾನು ಅದನ್ನು ನಿಮಗೆ ಓದಿಹೇಳುತ್ತೇನೆ ಮತ್ತು ಅದರ ಭಾಷಾಂತರವನ್ನು ಸಹಾ ಕೊಡುತ್ತೇನೆ.

**23ನೇ ಮಾರ್ಚ್ 1961**

**(ಉರ್ದು ಕವಿತೆ)**

ಅವರ ಮನಸ್ಸನ್ನು ತಿಳಿಯುವವರೆಗೂ ಅವರ ಕ್ರಿಯೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲವೆಂದು ನಾನು ಮನಗಂಡಿದ್ದೇನೆ. ಈ ಕವಿತೆಯ ಶೀರ್ಷಿಕೆಯು "ಸಚಿವರ ಪ್ರಾರ್ಥನೆ" ಅವರು ಹೇಗೆ ಪ್ರಾರ್ಥಿಸುತ್ತಾರೆ. ಕಳೆದ ಬಾರಿ ನಾನು ಇದನ್ನು ಓದಿದಾಗ ಅವರು ಇದನ್ನು ಒಂದು ಹಾಡು ಎಂದು ಹೇಳಿದರು. ನಾನು ಯಾವ ಹಾಡನ್ನು ಹಾಡುತ್ತಿಲ್ಲ.

*"ದೇಶದ ಎಲ್ಲ ನಾಯಕರು ಅಳಿಯಲಿ*

*ಓ' ಶಂಭು ನಾನು ನೋರಲ್ ಅರ್ಚಿಸುತ್ತೇನೆ.*

*5 ಅಥವಾ 6 ಭಿನ್ನಮತೀಯರು ಅಳಿಯಲಿ ಅವರಲ್ಲಿ 20 ಅಥವಾ 25*

*ಜನರು ಅತಿಯಾದ ಜ್ವರದಿಂದ ನರಳಲಿ.*

*ಸದಾ ಏನನ್ನಾದರೂ ಕೂಗಾಡಿ ಕಿರುಚಾಡುವ ಈ ಎಲ್ಲಾ*

*ವಿರೋಧಿ ಜನರು ಅಳಿಯಲಿ*

*ನಿಜಲಿಂಗಪ್ಪನವರ ಬೆನ್ನುಮೂಳೆ ಮುರಿಯಲಿ*

*ಏಕೆಂದರೆ ಸದಾ ಅವರು ಈ ಸಚಿವರ ಬಗ್ಗೆ ಚಿಂತಿಸುತ್ತಾರೆ.*

*ದೊಡ್ಡ ಮನುಷ್ಯರಾದ – ಸಾಹುಕಾರ ಚನ್ನಯ್ಯ ಅವರ ಅಂಗಡಿ ಸುಟ್ಟು ಭಸ್ಮವಾಗಲಿ,*

*ಏಕೆಂದರೆ ಅವರ ಮೂಲಕ ನಮ್ಮ ಶತ್ರುಗಳಿಗೆ ಆಗ್ಗಿಂದಾಗ್ಗೆ ನೆರವು ದೊರೆಯುತ್ತಿದೆ.*

**ಮಾನ್ಯ ಉಪ ಸಭಾಧ್ಯಕ್ಷರು:**– ಅವರು ಏನನ್ನು ಓದುತ್ತಿದ್ದಾರೆ ?

**ಶ್ರೀ ಬಿ. ಶ್ಯಾಮಸುಂದರ್:**– ಇದೊಂದು ಕವಿತೆ. ಈ ಆಯವ್ಯಯ ರಚನೆಕಾರರು ಹೇಗೆ ಆಲೋಚಿಸುತ್ತಾರೆ ಎಂಬುದರ ಚಿತ್ರಣ ಕೊಡುತ್ತಿದ್ದೇನೆ. ಇದೆಲ್ಲವೂ ಆಯವ್ಯಯವನ್ನು ಕುರಿತದ್ದು, ಆಯವ್ಯಯಕ್ಕೆ ಮಾತ್ರಾ ಸಂಬಂಧಪಟ್ಟಿದ್ದು. ಇದು ಅವರ ಮನಸ್ಥಿತಿಯನ್ನು ತಿಳಿಸುತ್ತದೆ.

*ವಿಧಾನ ಸೌಧದ ಎಲ್ಲಾ ಇಟ್ಟಿಗೆ ಮತ್ತು ಕಲ್ಲುಗಳು ಉರುಳಿ ಹೋಗಲಿ, ಏಕೆಂದರೆ ಈ ಕಟ್ಟಡದಿಂದಾಗಿ ಹಂತಮಂತಯ್ಯನವರ ಹೆಸರು ಪ್ರತಿಯೊಬ್ಬರಿಗೂ ಚಿರಪರಿಚಿತವಾಗಿದೆ.*

*ಮಾತನಾಡುವ ಎಲ್ಲರ ಬಾಯಿಗಳು ಮಣ್ಣಿನಿಂದ ತುಂಬಲಿ ಏಕೆಂದರೆ ಅವರು ನಿಜ ನುಡಿಯುತ್ತಾರೆ.*

*ಬಡಜನರ ಎಲ್ಲಾ ಗುಡಿಸಲುಗಳು ಸುಟ್ಟು ಭಸ್ಮವಾಗಲಿ ಏಕೆಂದರೆ ಅವರು ಸದಾ ನ್ಯಾಯ, ನ್ಯಾಯ ಎಂದು ಕೂಗುತ್ತಿರುತ್ತಾರೆ ಮತ್ತು ನ್ಯಾಯವನ್ನು ಕೇಳುತ್ತಾರೆ.*

*ಮತದಾರರ ಎಲ್ಲಾ ಬಸ್ತಿಗಳು ಅಥವಾ ವಸತಿ ಪ್ರದೇಶಗಳು ಸುಟ್ಟು ಭಸ್ಮವಾಗಲಿ, ಏಕೆಂದರೆ ಅವರು ಸದಾ ನಮ್ಮನ್ನು ಭ್ರಷ್ಟರು ಮತ್ತು ಸ್ವಜನಪಕ್ಷಪಾತಿಗಳೆಂದು ನಿಂದಿಸುತ್ತಾರೆ.*

*ಈ ಎಲ್ಲಾ ಅಧಿಕಾರಿಗಳಿಗೂ ಹೃದಯಾಘಾತವಾಗಲಿ, ಏಕೆಂದರೆ ಅವರು ಸಚಿವರು ಮಾಡುವ ಆದೇಶಗಳೆಲ್ಲ ತಪ್ಪು ಎಂದು ಹೇಳುತ್ತಾರೆ. ಹಾಗಾಗಿ ಅವರ ಹೃದಯ ಸ್ಥಂಭನವಾಗಲಿ.*

*ಸಚಿವ ಸಂಪುಟದ ಎಲ್ಲಾ ಕಡತಗಳನ್ನು ಇಲಿಗಳು ತಿನ್ನಲಿ, ಏಕೆಂದರೆ ಅವರಲ್ಲಿರುವ ಆದೇಶಗಳು ಒಳ್ಳೆಯವಲ್ಲ.*

*ಕೇಂದ್ರ ಸರ್ಕಾರದ ಹಡಗು ಮುಳುಗಲಿ. ಏಕೆಂದರೆ ಅಲ್ಲಿಂದಲೇ ನೀವು ಸದಾ ಹೊಸ ಆದೇಶಗಳನ್ನು ಪಡೆಯುತ್ತೀರಿ.*

*ಇಡೀ ಮೈಸೂರು ರಾಜ್ಯ ನಾಶವಾಗಲಿ ಮತ್ತು ಹಾಳಾಗಲಿ ನಾನು ಮತ್ತು ನಮ್ಮ ನಾಯಕ ಜತ್ತಿ ಮಾತ್ರಾ ಬದುಕಲಿ.*

ಇದು ಸಚಿವರೊಬ್ಬರ ಪ್ರಾರ್ಥನೆ. ಇದು ನಮ್ಮ ಸರ್ಕಾರ ನಡೆಸುತ್ತಿರುವ ಜನರ ಮನೋಭಾವವನ್ನು ಸೂಚಿಸುತ್ತದೆ ಮತ್ತು ರಾಜ್ಯದಲ್ಲಿ ಈ ರೀತಿಯಲ್ಲಿಯೇ ಆಡಳಿತ ನಡೆಸಲಾಗುತ್ತದೆ. ನೀವು ರಾಜ್ಯಾದ್ಯಂತ ಆಡಳಿತವನ್ನು ಗಮನಿಸಿದರೆ, ಸಚಿವರ ಆದೇಶಗಳನ್ನು ಎಲ್ಲಿ ಪಾಲಿಸುತ್ತಿದ್ದಾರೆ, ಪೊಲೀಸರು ಸಚಿವರ ಆದೇಶವನ್ನು ಎಂದೂ ಪಾಲಿಸುವುದೇ ಇಲ್ಲ. ಕಂದಾಯ ಅಧಿಕಾರಿಗಳು ಎಂದೂ ಸಚಿವರ ಆದೇಶಗಳನ್ನು ಪಾಲಿಸುವುದೇ ಇಲ್ಲ. ಯಾರೇ ಸಚಿವರ ಆದೇಶವನ್ನು ಎಲ್ಲಿಯೂ ಮನ್ನಿಸುತ್ತಿಲ್ಲ. ಇದು ವಾಸ್ತವ ಸಂಗತಿ.

ನನ್ನ ಊರಿನ ಇಂತಿಂತಹ ಅಧಿಕಾರಿಗಳು "ಈ ಸಚಿವರನ್ನು ಯಾರು ಕೇರ್ ಮಾಡುತ್ತಾರೆ" ಎಂದು ಹೇಳಿರುವ ಬಗ್ಗೆ ನಾನು ಒಂದೆರಡು ಬಾರಿ ಸಚಿವರ ಗಮನಕ್ಕೆ ತಂದಿದ್ದೇನೆ. ಇದು ಈಗಿರುವಂಥ ಪರಿಸ್ಥಿತಿ. ಇದಕ್ಕಾಗಿ ನಾನು ವಿಷಾಧಿಸುತ್ತೇನೆ. ಇದೆಲ್ಲ ಏಕೆ ಈ ರೀತಿಯಾಗುತ್ತಿದೆ? ಏನು ವಿಷಯ? ನೀವು ನಿಮ್ಮ ವ್ಯವಹಾರಗಳ ಬಗ್ಗೆ ತೀವ್ರ ಗಮನ ಹರಿಸದಿರುವುದೇ ಇದಕ್ಕೆಲ್ಲಾ ಕಾರಣ.

**ಶ್ರೀ ಬಿ. ಬಸವಲಿಂಗಪ್ಪ:** ಯಾರು ಆ ಅಧಿಕಾರಿ ?

**ಶ್ರೀ ಬಿ. ಶ್ಯಾಮಸುಂದರ್:** ಶ್ರೀ ಪ್ರಭಾಕರ ರಾವ್, ಗುಲ್ಬರ್ಗದ ಅಸಿಸ್ಟೆಂಟ್ ಕಮಿಷನರ್.

# ಕೆಟ್ಟ ವ್ಯವಸ್ಥೆಯಲ್ಲಿ ಒಳ್ಳೆಯ ಸ್ನೇಹಿತರಿಗೆ ಕಾಲವಿಲ್ಲ!

ನಾನು ಈಗ ಪೋಲೀಸ್ ವಿಷಯದ ಬಗೆಗೆ ಮಾತನಾಡುವುದಿಲ್ಲ. ನಾನು ಈಗ ಕಂದಾಯ ವಿಷಯದ ಬಗ್ಗೆ ಮಾತನಾಡುತ್ತೇನೆ. ಕಂದಾಯ ಇಲಾಖೆಯು ಇಡೀ ರಾಜ್ಯದ ಜೀವನಾಡಿ ಮತ್ತು ಜನರು ಶಾಂತಿ ಮತ್ತು ನೆಮ್ಮದಿಯಿಂದ ಜೀವಿಸಬಯಸುವ ಸ್ಥಳವೇ ಜಮೀನು. ನನ್ನ ಸ್ನೇಹಿತರು ನೆನ್ನೆ ಇಲ್ಲಿ ಹೇಳಿದಂತೆ, ಈ ಎಲ್ಲಾ ವರ್ಷಗಳಲ್ಲಿ ನಾವು ಭೂಸುಧಾರಣೆಗಳ ಬಗ್ಗೆ ಯೋಚಿಸುತ್ತಿದ್ದೇವೆ. ಆದರೆ, ಆ ದಿನಗಳು ಮುಗಿದುಹೋದವು ಮತ್ತು ಯಾವುದೇ ಭೂಸುಧಾರಣೆಯಿಂದ ಯಾರೇ ಬಡಜನರಿಗೆ ಅನುಕೂಲವಾಗುವುದಿಲ್ಲ. ಭೂ ಸುಧಾರಣೆಯ ಈ ಮಾತಿನಲ್ಲಿಯೇ ನಾವು ನಿರಂತರ ಮೂರು ವರ್ಷಗಳನ್ನು ಕಳೆದಿದ್ದೇವೆ. ನಾವು ಭೂ ಸುಧಾರಣೆಗಳನ್ನು ಅನುಷ್ಠಾನಗೊಳಿಸಿಲ್ಲ. ಅದಕ್ಕೆ ತೊಡಕೆಲ್ಲಿತ್ತು ಎಂಬುದಕ್ಕೆ ಉತ್ತರ ನನಗೂ ಗೊತ್ತಿದೆ ಮತ್ತು ವಿರೋಧ ಪಕ್ಷದ ನನ್ನ ಸ್ನೇಹಿತರಿಗೂ ಸಹಾ ಗೊತ್ತಿದೆ. ಅವರು ಅವರದೇ ಆದ ಸಮಸ್ಯೆಗಳ ಬಗ್ಗೆ ಚೆನ್ನಾಗಿ ಅರಿತಿರುತ್ತಾರೆ. ಆದ್ದರಿಂದ ನಾನು ಅದನ್ನು ಇಲ್ಲಿ ಹೇಳಬಯಸುವುದಿಲ್ಲ. ಆದರೆ ಮಣ್ಣಿನ ಮಕ್ಕಳಾದ ನಮ್ಮನ್ನು ನಿರ್ಲಕ್ಷಿಸಿರುವುದು ಮತ್ತು ನಮ್ಮನ್ನು ಆಚೆಗೆಸೆದು ರಾಜಕೀಯ ಮತ್ತು ಅಂತರರಾಷ್ಟ್ರೀಯ ಪ್ರಚಾರಕ್ಕಾಗಿ ಹೊರಗಿನವರನ್ನು ಕರೆತಂದು ಅವರಿಗೆ ಎಲ್ಲಾ ಸೌಲಭ್ಯ ಕೊಟ್ಟಿರುವುದು ನನಗೆ ಬಹಳ ದುಃಖ ಆಗುತ್ತದೆ. ಟಿಬೆಟಿಯನ್ನರನ್ನು ಹೊರಗಿನಿಂದ ಇಲ್ಲಿಗೆ ಕರೆತಂದು ಅವರಿಗೆ ಎಲ್ಲಾ ಸೌಲಭ್ಯಗಳನ್ನು ನೀಡಿರುವಾಗ ನಮ್ಮನ್ನು ನಮ್ಮ ತಾಯ್ನಾಡಿನಲ್ಲಿಯೇ ಅಸ್ಪೃಶ್ಯರಂತೆ ಕಾಣಲಾಗುತ್ತಿದೆ. ಈ ಬಗ್ಗೆ ನೆನ್ನೆ ನನ್ನ ಸ್ನೇಹಿತರಾದ ಶ್ರೀ ದೇವರಾಜ್ ಅರಸ್ ಮಾತನಾಡಿದರು. ದೇಶಾದ್ಯಂತ ಪುನರ್ವಸತಿ ಇಲಾಖೆ ಇದೆ. ಇಲ್ಲಿ ನಿರಾಶ್ರಿತರಾಗಿ ಹೊರಗಿನಿಂದ ಬಂದವರನ್ನು ಬರಮಾಡಿಕೊಂಡು ಅವರಿಗೆ ಎಲ್ಲಾ ಸೌಲಭ್ಯ ನೀಡಲಾಗುತ್ತಿದೆ. ಆದರೆ ಶತಶತಮಾನಗಳಿಂದ ನಮ್ಮ ದೇಶದಲ್ಲೇ ನಿರಾಶ್ರಿತರಾಗಿರುವ ನಮ್ಮನ್ನು ನಿರ್ಲಕ್ಷಿಸಲಾಗುತ್ತಿದೆ ಮತ್ತು ನಮ್ಮನ್ನು ಯಾರೂ ಕೇರ್ ಮಾಡುವುದಿಲ್ಲ. ನಿಮ್ಮ ದೇವಾಲಯಗಳಲ್ಲಿ ಸಹಾ ನಮ್ಮನ್ನು ಅಸ್ಪೃಷ್ಯರಂತೆ ಕಾಣಲಾಗುತ್ತಿದೆ. ಅವರ ಪ್ರಕಾರ ನಿಮ್ಮ ದೇವರು ನಮ್ಮ ದೇವರಲ್ಲ. ನಿಮ್ಮ ದೇವತೆ ನಮ್ಮ ದೇವತೆಯಲ್ಲ. ವಸ್ತುಸ್ಥಿತಿ ಹೀಗಿರುವಾಗ ನೀವು ಟಿಬೆಟಿಯನ್ನರನ್ನು ಇಲ್ಲಿಗೆ ಆಹ್ವಾನಿಸಿರುವುದು ಅಂತರರಾಷ್ಟ್ರೀಯ ಪ್ರಾಬಲ್ಯವನ್ನು ಉಪಶಮನಗೊಳಿಸುವುದಕ್ಕೆ ಮಾತ್ರವೆಂದು ನಿಮಗನಿಸುವುದಿಲ್ಲವೇ? ಈ ದೇಶದ ಸಂಕಟ ಬೇಗುದಿಯನ್ನು ಕೆಲವು ವಿದೇಶಿ ಶಕ್ತಿಗಳು ದುರುಪಯೋಗಪಡಿಸಿಕೊಂಡಲ್ಲಿ ಇಲ್ಲಿನ ಪ್ರತಿಕ್ರಿಯೆ ಏನು ಎಂಬುದನ್ನು ಯೋಚಿಸಿ. ಇಲ್ಲಿನ ಸಂಕಟ ಬೇಗುದಿಗಳ ಪರಿಣಾಮಗಳನ್ನು ನಿಮ್ಮ ವಿರುದ್ಧ ಉಪಯೋಗಿಸಿದಲ್ಲಿ ನಿಮಗೆ ಅದೊಂದು ಕೆಟ್ಟ ದಿನವೆಂದು ಅನಿಸುವುದಿಲ್ಲವೇ ಯೋಚಿಸಿ, ಸಚಿವರು ಆದೇಶಗಳನ್ನು ಹೊರಡಿಸಿದರೂ ಅಧಿಕಾರಿಗಳು ಕೇರ್ ಮಾಡುವುದಿಲ್ಲ. ಇದಕ್ಕೆ ಸಂಬಂಧಪಟ್ಟ ಎಲ್ಲಾ ಕಡತಗಳು ನನ್ನ ಬಳಿ ಇವೆ. ಅವುಗಳನ್ನು ನಾನು ಇಲ್ಲಿಗೆ ತಂದಿದ್ದೇನೆ, ಸಚಿವರು ಇಚ್ಛಿಸಿದಲ್ಲಿ ಅದನ್ನು ಉಲ್ಲೇಖಿಸುತ್ತೇನೆ. ಎರಡು ದಿವಸಗಳ ಹಿಂದೆ ಮಾನ್ಯ ಸಚಿವರಾದ ಕಡಿದಾಳ್ ಮಂಜಪ್ಪನವರಿಗೆ ನಾನು ಎರಡು ಕಡತಗಳನ್ನು ಕೊಟ್ಟಿದ್ದೇನೆ. ಅವರು ಬಹಳ ಒಳ್ಳೆಯ ಮನುಷ್ಯ. ಅವರು ನನ್ನ ಉತ್ತಮ ಸ್ನೇಹಿತರಲ್ಲೊಬ್ಬರು. ನಾನು ಅವರನ್ನು ಆಗಾಗ್ಗೆ ಭೇಟಿಮಾಡುತ್ತೇನೆ.

**ಮಾನ್ಯ ಸದಸ್ಯರೊಬ್ಬರು:** ಅವರು ಎಲ್ಲರಿಗೂ ಒಳ್ಳೆಯವರೆ.

**ಶ್ರೀ ಬಿ. ಶ್ಯಾಮಸುಂದರ್:** ಕೆಟ್ಟ ವ್ಯವಸ್ಥೆಯಲ್ಲಿ ಒಳ್ಳೆಯ ಸ್ನೇಹಿತರಿಗೆ ಕಾಲವಿಲ್ಲ. ಅವರು ಕೆಲವೊಂದು ಆದೇಶಗಳನ್ನು ಹೊರಡಿಸಿರುತ್ತಾರೆ. ಎಂತಹ ಸೋಲು! ನಾನು ಹಾಗೆ ಹೇಳಿದರೆ ವ್ಯಕ್ತಿತ್ವವೇ ಅಳಿಸಿಹೋಗುತ್ತದೆ. ಒಂದು ಸ್ಥಳದಲ್ಲಿ ಶೇಕ್ಸ್‌ಪಿಯರ್ ಹೇಳಿರುವಂತೆ "ಎಂತಹ ಸೋಲು ನನ್ನ ದೇಶವಾಸಿಯೇ? ನೀನೂ ಸೋತೆ, ನಾನು ಸೋತೆ. ಇಡೀ ದೇಶವೇ ಸೋತಿದೆ. ಇದೇ ರೀತಿಯಾಗಿ ಅವರು ಸೋತಿರುತ್ತಾರೆ.

ಬೀದರ್‌ನ 42 ಕುಟುಂಬಗಳಿಗೆ ಹತ್ತು ಎಕರೆ ಜಮೀನು ಹಂಚಿಕೆಮಾಡಲು ಜಿಲ್ಲಾಧಿಕಾರಿಗೆ ಸೂಚಿಸಿ ಎರಡು ವರ್ಷಗಳ ಹಿಂದೆ ಸಚಿವರು ಆದೇಶ ಹೊರಡಿಸಿದ್ದರು. ಜಿಲ್ಲಾಧಿಕಾರಿಗಳು ಆದೇಶ ಹೊರಡಿಸಿದ್ದು ಈಗ ಎರಡು ವರ್ಷಗಳಾದರೂ ಆ ಆದೇಶಗಳನ್ನು ಕಾರ್ಯಗತಗೊಳಿಸಿರುವುದಿಲ್ಲ. ಏಕೆ? ಏಕೆಂದರೆ ತಹಸೀಲ್ದಾರ್ ಮತ್ತು ಗಿರಿದವರ್ ಆದೇಶಗಳನ್ನು ಪಾಲಿಸಲು ನಿರಾಕರಿಸಿದ್ದಾರೆ. ಹರಿಜನರಿಗೆ ಜಮೀನಿನ ಅಗತ್ಯವಿಲ್ಲವೆಂದು ಅವರು ಹೇಳುತ್ತಾರೆ. ಹರಿಜನರಿಗೆ ಒಂದು ಎಕರೆ ಜಮೀನನ್ನು ಕೊಡಬಹುದೆಂದು ಅವರು ಕಡತದಲ್ಲಿ ವಾಸ್ತವಿಕವಾಗಿ ಬರೆದಿರುತ್ತಾರೆ. ನೀವು ಒಟ್ಟಾಗಿ ಹೂಳುವುದನ್ನು ಆಯ್ಕೆಮಾಡಿಕೊಂಡ ಹೊರತು ಒಂದು ಎಕರೆ ಜಮೀನು ನಿಮ್ಮ ಸ್ಮಶಾನಕ್ಕೂ ಸಾಕಾಗುವುದಿಲ್ಲ. ನಿಮ್ಮಲ್ಲಿ ಪ್ರತಿಯೊಬ್ಬರು ನಿಮ್ಮ ಸ್ಮಶಾನಕ್ಕೆ ಗೌರವಾನ್ವಿತ ಸ್ಥಳ ಬಯಸಿದರೆ ಈ ಒಂದು ಎಕರೆ ಜಮೀನು ಸಾಕಾಗುವುದಿಲ್ಲ. ಅದು ಕಂದಾಯ ಸಚಿವರ ಹಣೆಬರಹವಾಗಿದೆ. ಕಂದಾಯ ಇಲಾಖೆಯ ವ್ಯವಹಾರಗಳ ಚುಕ್ಕಾಣಿ ಹಿಡಿದಿರುವಂಥ ಸಮರ್ಥ ಮತ್ತು ಪ್ರಾಮಾಣಿಕ ಮನುಷ್ಯನಿದ್ದರೂ ಪರಿಸ್ಥಿತಿ ಎಷ್ಟು ಹದಗೆಡುತ್ತಿದೆ ಎಂದು ಹೇಳಲು ನನಗೆ ವಿಷಾದವಾಗುತ್ತಿದೆ. ಕಂದಾಯ ಇಲಾಖೆಯಲ್ಲಿ ಅಂತಹ ವ್ಯಕ್ತಿ ವ್ಯವಹಾರಗಳ ಚುಕ್ಕಾಣಿ ಹಿಡಿದಿರುವಾಗಲೇ ಈ ಪರಿಸ್ಥಿತಿ ಇರಬೇಕಾದರೆ ಇತರ ಇಲಾಖೆಗಳ ಪರಿಸ್ಥಿತಿ ಹೇಗಿರಬೇಡ? ನನಗೆ ಸಮಯವಿಲ್ಲ, ಇದ್ದಿದ್ದರೆ ನಾನು ಎಳೆಎಳೆಯಾಗಿ ಅವರಿಗೆ ಬಿಡಿಸಿ ಹೇಳುತ್ತಿದ್ದೆ. ನಾನು ಎಲ್ಲಾ ದಾಖಲೆಗಳನ್ನು ತಂದಿದ್ದೇನೆ. ನಮಗೆ ಯಾವುದೇ ರೀತಿಯ ದಯೆದಾಕ್ಷಿಣ್ಯ ಬೇಕಾಗಿಲ್ಲವೆಂಬುದನ್ನು ಮಾನ್ಯ ಸಚಿವರು ಗಮನಿಸಬೇಕು, ಆದರೆ ಅಧಿನಿಯಮದಲ್ಲಿ ಸರ್ಕಾರವೇ ಜಮೀನನ್ನು ಸ್ವಾಧೀನಪಡಿಸಿಕೊಂಡು ಅದನ್ನು ಹರಿಜನರಿಗೆ ನೀಡುವಂಥ ಅವಕಾಶ ಕಲ್ಪಿಸಬೇಕೆಂದು ನಾನು ಬಯಸುತ್ತೇನೆ. ಇದಕ್ಕಾಗಿ ಅವರು ಹಣ ಒದಗಿಸಬೇಕು. ಅವರು ಹರಿಜನರಿಗಾಗಿ ಜಮೀನನ್ನು ಸ್ವಾಧೀನಪಡಿಸಿಕೊಂಡು ಆ ಜಮೀನುಗಳನ್ನು ಟಿಬೆಟಿಯನ್ನರಿಗೆ ಜಮೀನುಗಳನ್ನು ಕೊಟ್ಟಿರುವಂತೆ ಹರಿಜನರಿಗೆ ಕೊಡಬೇಕು. ಅವರು ಇದನ್ನು ಮಾಡದಿದ್ದಲ್ಲಿ, ಅವರು ನಮ್ಮ ಸಹಾನುಭೂತಿಯನ್ನು ಮತ್ತು ಅವರ ಒಳ್ಳೆತನದಲ್ಲಿ ನಮಗಿರುವ ವಿಶ್ವಾಸವನ್ನು ಖಂಡಿತವಾಗಿಯೂ ಕಳೆದುಕೊಳ್ಳುತ್ತಾರೆ.

ನನಗೆ ಬಂದಿರುವಂತಹ ಟೆಲಿಗ್ರಾಂ ಮತ್ತು ಪತ್ರಗಳು ಇಲ್ಲಿವೆ. ಈ ಟೆಲಿಗ್ರಾಂ ಪ್ರಕಾರ ಅದೇ ವ್ಯಕ್ತಿ ಶ್ರೀ ಪ್ರಭಾಕರ ರಾವ್ ಷಹಬಾದ್ ಮತ್ತು ನಾನ್ ಮಹಗಾವ್‌ಗೆ ಹೋಗಿ ಅಲ್ಲಿನ ಸ್ಮಶಾನವನ್ನು

ಹಾಳುಗೆಡವಿದ್ದಾರೆ. "ಇದನ್ನು ಮಾಡಲು ನನಗೆ ಅಧಿಕಾರವಿದೆ" ಎಂದು ಅವರು ಹೇಳುತ್ತಾರೆ. ಅವರು ಏತಕ್ಕಾಗಿ ಹೀಗೆ ಮಾಡಿರುತ್ತಾರೆ! ಅವರು ಆ ಜಮೀನನ್ನು ಬೇರೆ ಯಾರಿಗೋ ಕೊಡಬಯಸಿದ್ದಾರೆ. ನಾನು ಕೇವಲ ಒಂದು ಜಿಲ್ಲೆ ಬಗ್ಗೆ ಮಾತ್ರ ಉಲ್ಲೇಖಿಸಿದ್ದೇನೆ, ಇತರ ಜಿಲ್ಲೆಗಳ ಸಂಬಂಧದಲ್ಲಿ ನೀವು ಇಂಥ ಹಲವಾರು ಪ್ರಕರಣಗಳನ್ನು ಕಾಣುವಿರಿ, ಮಾನ್ಯ ಕಂದಾಯ ಸಚಿವರು ಇಲ್ಲಿದ್ದಾರೆ. ನಾನು ಅವರ ಗಮನಕ್ಕೆ ಎಲ್ಲಾ ವಿಷಯವನ್ನು ತರದಿದ್ದರೂ ಅವರು ಇನ್ನುಮುಂದೆ ಬಹಳ ಹುಷಾರಿನಿಂದಿರುತ್ತಾರೆ ಮತ್ತು ಹರಿಜನರು ಭೂಮಿ ಪಡೆಯುವುದರಲ್ಲಿ ಯಾವುದೇ ಅಡಚಣೆ ಉಂಟಾಗದಂತೆ ತ್ವರಿತ ಆದೇಶಗಳನ್ನು ಹೊರಡಿಸುತ್ತಾರೆ. ಸಧ್ಯದಲ್ಲಿ ಅವರು ಆದೇಶ ಹೊರಡಿಸುವಷ್ಟು ವಿನಮ್ರರಾಗಿದ್ದರು, ಆದರೆ ಅದು ಅನುಷ್ಠಾನವಾಗಿರುವುದಿಲ್ಲ. ಹರಿಜನರಿಗೆ ಎಷ್ಟು ಎಕರೆ ಜಮೀನನ್ನು ವಿತರಣೆ ಮಾಡಲಾಗಿದೆ ಎಂಬುದನ್ನು ತಿಳಿಯಬಯಸುತ್ತೇನೆಂದು ನಾನು ಗುಲ್ಬರ್ಗದ ವಿಭಾಗಾಧಿಕಾರಿಯವರಿಗೆ ಪತ್ರ ಬರೆದಿದ್ದೇನೆ. ಅವರು ಒಂದು ಪಟ್ಟಿ ಕೊಟ್ಟಿದ್ದಾರೆ: ಅದರಲ್ಲಿ ಇತರ ಎಲ್ಲರ ಹೆಸರಿದ್ದರೂ ಒಬ್ಬನೇ ಒಬ್ಬ ಹರಜನದವನ ಹೆಸರು ಇಲ್ಲ. ಯಾರೊಬ್ಬರ ಹೆಸರು ಅದರಲ್ಲಿ ಇಲ್ಲದಿರುವುದು ನನಗೆ ಕಂಡುಬಂದಿದೆ. ಹರಿಜನರ ಹೆಸರಿನಲ್ಲಿ, ಜಮೀನುಗಳನ್ನು ಇತರರಿಗೆ ವಿತರಿಸಲಾಗುತ್ತಿದೆ. ಭೂ ವಿತರಣಾ ನಿಯಮಗಳಲ್ಲಿ ಒಂದು ದೋಷವಿದೆ. ಹತ್ತು ಎಕರೆಗಿಂತ ಹೆಚ್ಚು ಜಮೀನು ಇದ್ದಲ್ಲಿ ಅದನ್ನು ವಿಭಾಗಿಸಬೇಕು ಮತ್ತು ಶೇ. 50 ರಷ್ಟು ಹರಿಜನರಿಗೆ ಮನೆ, ಶೇ. 50 ರಷ್ಟು ಹರಿಜನೇತರರಿಗೆ ಹೋಗುವಂತೆ ವಿಭಾಗಿಸಬೇಕಾಗುತ್ತದೆ. ಹರಿಜನರೇತರರು ಈಗಾಗಲೇ ಸಾವಿರಾರು ಎಕರೆಗಳಷ್ಟು ಜಮೀನು ಹೊಂದಿರುತ್ತಾರೆ. ನಾನು ನಮ್ಮ ಪಾಲು ಪಡೆಯುವಾಗ, ಹರಿಜನೇತರರು ನಮ್ಮೊಡನೆ ಪಾಲು ಪಡೆಯಲು ಬರುತ್ತಾರೆ. ಪರಿಸ್ಥಿತಿ ಹೀಗಿರಬೇಕಾದರೆ, ನೀವು ನಮ್ಮ ಹಿತಾಸಕ್ತಿಗಳನ್ನು ಯಾವ ರೀತಿಯಲ್ಲಿ ರಕ್ಷಿಸುವಿರೆಂಬುದೇ ನನಗೆ ತಿಳಿಯುತ್ತಿಲ್ಲ.

ನಾನು ಈಗ ಬಹಳ ಮುಖ್ಯ ವಿಷಯವಾದ ಶಿಕ್ಷಣದ ಕಡೆ ಬರುತ್ತೇನೆ. ಮೂಲ ಶಿಕ್ಷಣ ಎಂದು ಯಾವುದನ್ನು ಕರೆಯಲಾಗುವುದೋ ಅದು ವಿಫಲವಾಗಿರುವ ಸಂಗತಿ ಸಾಬೀತಾಗಿರುವುದರ ಬಗ್ಗೆ ನಾನು ಹೇಳಬಯಸುತ್ತೇನೆ. ಮೂಲ ಶಿಕ್ಷಣದ ನೆಪದಲ್ಲಿ ನಮ್ಮನ್ನು ಇರುವಲ್ಲಿಯೇ ಇಡುವುದಕ್ಕೆ ಮಾಡಿರುವ ಸಂಚು ಇದು. ಅವರು, ನಮ್ಮನ್ನು ಕುಲಕಸಬಿನಲ್ಲಿ ತರಬೇತಿ ನೀಡಲು ಮತ್ತು ನಮ್ಮನ್ನು ದೋಬಿ, ಬನಿಯಾ ಮತ್ತು ಅಂತೆಯೇ ಇತರ ಕಸಬುದಾರರಾಗಿಯೇ ಇಡಲು ಬಯಸಿದ್ದಾರೆ. ಮೂಲಶಿಕ್ಷಣದ ಬಗ್ಗೆ ಜೋರಾಗಿ ವಾದಿಸುವವರ ಮಕ್ಕಳೇ ಕಾನ್ವೆಂಟ್‌ಗಳಿಗೆ ಹೋಗುತ್ತಿರುವ ವಿಷಯ ಖಂಡಿತವಾಗಿ ನನಗೆ ಗೊತ್ತಿದೆ. ನಮಗೆ, ಕನಿಷ್ಠ ಪರಿಶಿಷ್ಟ ಜಾತಿಗಳಿಗೆ ಮೂಲ ಶಿಕ್ಷಣವನ್ನು ನಾವು ಬಯಸುವುದಿಲ್ಲ. ಎಲ್ಲರಿಗೂ ಉನ್ನತಶಿಕ್ಷಣ ಬೇಕೆಂದು ನಾವು ಬಯಸುತ್ತೇವೆ.

ನಾನು ಈಗ ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಕೆಲವು ವಿಷಯಗಳನ್ನು ಹೇಳುತ್ತೇನೆ. ನನ್ನ ಸ್ನೇಹಿತರು 'ಸಮುದಾಯ ಯೋಜನೆ ಅಭಿವೃದ್ಧಿ' ಎಂದು ಕರೆಯಲಾಗುವ

ಕಿರುಹೊತ್ತಿಗೆಯನ್ನು ಪ್ರಕಟಿಸಿದ್ದಾರೆ. ಅವರು ಎಲ್ಲಾ ವಿವರಗಳನ್ನು ಕೊಟ್ಟಿದ್ದಾರೆ. ಬಲವಂತರಾಯ್ ಮೆಹ್ತಾ ಸಮಿತಿ ಇದ್ದು, ಅದು ಸಮುದಾಯದ ಅಭಿವೃದ್ಧಿಯ ಸಾಧಕಬಾಧಕಗಳ ಬಗ್ಗೆ ಪರಿಶೀಲನೆ ನಡೆಸಿದ್ದು. ಈ ಯೋಜನೆಗಳಿಗಾಗಿ ಭಾರತದಾದ್ಯಂತ ಕೋಟಿಗಟ್ಟಲೆ ಹಣ ಖರ್ಚುಮಾಡಲಾಗಿದೆ. ಈ ಕಾರ್ಯಕ್ರಮದ ಅಡಿಯಲ್ಲಿ ಅದ್ಭುತ ಕೆಲಸವಾಗಿದ್ದರೂ ಹಳ್ಳಿಗಳಲ್ಲಿ ಬಡಜನರಿಗೆ ಕುಡಿಯುವ ನೀರಿನ ಬಾವಿಗಳು, ಕೃಷಿ ಸೌಲಭ್ಯಗಳು, ಹಾಸ್ಟೆಲ್‌ಗಳು ಮತ್ತು ಇತರ ಸೌಲಭ್ಯಗಳು ಮುಂತಾದ ಜನರ ವಾಸ್ತವಿಕ ಅಗತ್ಯಗಳನ್ನು ದೊರಕಿಸಕೊಡದಿರುವುದರಿಂದ ಹಣ ವಾಸ್ತವಿಕವಾಗಿ ದಂಡವಾಗಿದೆಯೆಂಬ ನಿರ್ಣಯಕ್ಕೆ ಅವರು ಬಂದಿರುತ್ತಾರೆ. ಇದು ನನ್ನ ಅನುಭವ. ಯಾವುದೇ ಗ್ರಾಮಕ್ಕೆ ಹೋಗಿ, ನಿಮಗೆ ಈ ಪರಿಸ್ಥಿತಿ ಕಾಣಸಿಗುತ್ತದೆ. ಹಲವಾರು ಬಾವಿಗಳನ್ನು ತೆಗೆಯಲಾಗಿದೆಯೆಂದು ನೆನ್ನೆ ಯಾರೋ ಒಬ್ಬರು ಸಚಿವರು ಹೇಳುತ್ತಿದ್ದರು. ಆ ಬಾವಿಗಳನ್ನು ಎಲ್ಲಿ ತೆಗೆದಿದ್ದಾರೆಂದು ನನಗೆ ಗೊತ್ತಿಲ್ಲ.

# ಸಹಕಾರಿ ಸಂಘಗಳ ಬಗ್ಗೆ

ಸಹಕಾರ ಸಂಘಗಳ ಬಗ್ಗೆ ಮಾತನಾಡುವುದಾದರೆ, ನಾನು ಅರ್ಥಶಾಸ್ತ್ರದ ವಿದ್ಯಾರ್ಥಿಯಾದರೂ ಪ್ರಸಕ್ತ ಸಹಕಾರ ಸಂಘಗಳ ಬಗ್ಗೆ ನನಗೆ ಯಾವುದೇ ವಿಚಾರ ಹೊಳೆಯುತ್ತಿಲ್ಲ. ಈ ಸಂಸ್ಥೆಗಳ ಬಗ್ಗೆ ಕೆಲವಾರು ವಿಷಯಗಳನ್ನು ನಾನು ಓದಿದ್ದೇನೆ. ಗುಲ್ಬರ್ಗದಲ್ಲಿ ಗೃಹನಿರ್ಮಾಣ ಸಹಕಾರ ಸಂಘವನ್ನು ನೋಂದಾಯಿಸಲು ಪ್ರಯತ್ನ ನಡೆದಿತ್ತು. ಆ ಬಗ್ಗೆ ಅರ್ಜಿ ಸಲ್ಲಿಸಿದ್ದರೂ ಇಂದಿನವರೆಗೆ ಅದು ನೋಂದಣಿಯಾಗಿರುವುದಿಲ್ಲ. ಸಹಕಾರ ಸಂಘಗಳನ್ನು ರಾಜಕೀಯ ಪ್ರಚಾರಕ್ಕೆ ಬಳಸುತ್ತಿರುವುದು ನನ್ನ ಸ್ನೇಹಿತರಾದ ಶ್ರೀ ಕೊಲ್ಲೂರು ಮಲ್ಲಪ್ಪನರಿಗೆ ತಿಳಿದಿದೆ. ಸಹಕಾರ ಸಂಘಗಳು ರಚನೆಯಾದಾಗಲೆಲ್ಲಾ ಅವುಗಳನ್ನು ಕಾಂಗ್ರೆಸ್ ಸ್ನೇಹಿತರೇ ನಿರ್ವಹಿಸುತ್ತಾರೆ. ಕಾಂಗ್ರೆಸ್ಸೇತರ ಜನರು ಸಂಘ ಪ್ರಾರಂಭಿಸಿದರೆ, ಕಾಂಗ್ರೆಸ್ಸಿಗರು ಅವರನ್ನು ತೆಗೆದುಹಾಕಿ ಕಾಂಗ್ರೆಸ್ಸಿನವರೇ ಸ್ವತಃ ಅದನ್ನು ನಡೆಸುತ್ತಾರೆ. ನಾನು ಒಂದು ಉದಾಹರಣೆ ಹೇಳುತ್ತೇನೆ. ಗುಲ್ಬರ್ಗದಲ್ಲಿ ಕೆಲವು ಮುಸಲ್ಮಾನ್ ಮತ್ತು ಹಿಂದೂ ಸ್ನೇಹಿತರು "ಬೋನ್ ಫರ್ಟಿಲೈಸರ್" ಎಂದು ಕರೆಯಲಾಗುವ ಸಂಘವನ್ನು ಪ್ರಾರಂಭಿಸಿರುತ್ತಾರೆ. ಮಾಜಿ ಅಬ್ಕಾರಿ ಸಚಿವರಾದ ಶ್ರೀ ಮಹಮದ್ ಅಲಿಯವರು ಆ ಸಂಘವನ್ನು ನಾಶಮಾಡಲು ಪ್ರಯತ್ನಿಸಿರುವುದಕ್ಕೆ ನಾನು ವಿಷಾದಿಸುತ್ತೇನೆ. ಸರ್ವಸದಸ್ಯರ ಸಭೆ ಕರೆಯದೆ ಆ ಸಂಘದ ಕಾರ್ಯದರ್ಶಿಯವರನ್ನು ವಜಾಮಾಡಲಾಗಿದೆ ಮತ್ತು ಶ್ರೀ ಮಹಮದ್ ಅಲಿಯವರು ಹಿಂದೆ ರಜಾಕರಾಗಿದ್ದರೆಂಬುದು ಶ್ರೀ ಕೊಲ್ಲೂರು ಮಲ್ಲಪ್ಪ ಮತ್ತು ಶ್ರೀ ವೀರೇಂದ್ರ ಪಾಟೀಲರಿಗೆ ಗೊತ್ತಿದೆ.

**ಶ್ರೀ ವೀರೇಂದ್ರ ಪಾಟೀಲ್**:- ನನಗೆ ಗೊತ್ತೇ ಇಲ್ಲ. ಅವರು ತುಂಬಾ ತಪ್ಪು ವಿವರಣೆ ನೀಡುತ್ತಿದ್ದಾರೆ, ಈ ಸದನದ ಮಾನ್ಯ ಸದಸ್ಯರು ಹಿಂದೆ ರಜಾಕರಾಗಿದ್ದರೆಂದು ಅವರು ಆರೋಪ ಮಾಡುತ್ತಿದ್ದಾರೆ. ಇದು ಸರಿಯಲ್ಲ.

**ಶ್ರೀ ಬಿ. ಶ್ಯಾಮಸುಂದರ್**: ಅವರೇನೆಂಬುದು ನನಗೆ ಗೊತ್ತು, ನೀವೇನೆಂಬುದು ನನಗೆ ಗೊತ್ತು, ನಾನು ಮಾತನಾಡಲು ವೇದಿಕೆಗೆ ಬಂದಾಗ, ಅವರು ಮುಂದು ನಿಂತು ನಮಸ್ಕಾರ ಮಾಡುತ್ತಿದ್ದರು. ಅಂಥ ಸಭ್ಯ ವ್ಯಕ್ತಿ ಆ ಸಹಕಾರ ಸಂಘವನ್ನು ಹಾಳುಮಾಡಿದ್ದಾರೆ. ಚಿತ್ರದುರ್ಗ ಮತ್ತು ಇತರ ಸ್ಥಳಗಳಲ್ಲಿ ಅಂತಹ ಪ್ರಕರಣಗಳ ಒಂದು ದೊಡ್ಡ ಪಟ್ಟಿಯೇ ನನ್ನ ಬಳಿ ಇದೆ. ಈ ಪಟ್ಟಿಯನ್ನು ಕಾಂಗ್ರೆಸ್ ಪಕ್ಷದ ನಾಯಕರ ಗಮನಕ್ಕೂ ಕೂಡ ತರಲಾಗಿದೆ. ಈ ಸದನದ ಗೌರವಾನ್ವಿತ ಸದಸ್ಯರೊಬ್ಬರು, ಅವರು ಈಗ ಇಲ್ಲಿಯೇ ಇದ್ದಾರೆ, ಅವರ ಹೆಸರನ್ನು ಹೇಳುವುದಕ್ಕೆ ಬಯಸುವುದಿಲ್ಲ, ಅವರು ಇದೆಲ್ಲವನ್ನೂ ಪಕ್ಷದ ಸಭೆಯಲ್ಲಿ ಕಾಂಗ್ರೆಸ್ ಪಕ್ಷದ ನಾಯಕರಿಗೆ ಲಿಖಿತ ರೂಪದಲ್ಲಿ ತಿಳಿಸಿದ್ದಾರೆ. ನಾನು ನನ್ನ ಸಮಯವನ್ನು ಹಾಳು ಮಾಡಿಕೊಳ್ಳುವುದಿಲ್ಲ. ಇದನ್ನು ಇಲ್ಲಿಗೆ ನಿಲ್ಲಿಸುತ್ತೇನೆ.

ಮತ್ತೊಂದು ವಿಷಯವನ್ನು ನಾನಿಲ್ಲಿ ಪ್ರಸ್ತಾಪಿಸುತ್ತೇನೆ. ಒಂದು ಬಹು ಮುಖ್ಯ ವಿಷಯವೆಂದರೆ, 18 ಮಂದಿ ಸಬ್‌ಇನ್ಸ್‌ಪೆಕ್ಟರ್‌ಗಳನ್ನು ಗುಲ್ಬರ್ಗ ವಿಭಾಗದಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವರ್ಗಾಯಿಸಲಾಗಿದೆ. ಶ್ರೀ ವೀರೇಂದ್ರ ಪಾಟೀಲ್‌ರವರು ಇದರ ಬಗ್ಗೆ ಗಮನಹರಿಸಬಹುದು. ಏನು ಕಾರಣ? ಸಂಬಂಧಪಟ್ಟ ಎಲ್ಲಾ ಸಂಗತಿಗಳನ್ನು ಮತ್ತು ಎಲ್ಲರ ಹೆಸರುಗಳನ್ನು ಕೊಡುವುದಕ್ಕೆ ನಾನು ಸಿದ್ಧವಾಗಿದ್ದು, ಈ ವಿಷಯದ ಬಗ್ಗೆ ತನಿಖೆ ನಡೆಸುವಂತೆ ಸರ್ಕಾರವನ್ನು ಕೋರುತ್ತೇನೆ.

**ಮಧ್ಯಾಹ್ನ 4.00 ಗಂಟೆ.**

ಸ್ವಾಮಿ, ಶ್ರೀ ವೀರೇಂದ್ರ ಪಾಟೀಲ್‌ರವರು ಇದಕ್ಕೆ ಅತ್ಯಂತ ಸೂಕ್ತ ವ್ಯಕ್ತಿ, ಆದರೆ ಅವರು, ಅವರ ಸ್ನೇಹಿತರ ಬಗ್ಗೆ ನಾನು ಏನಾದರೂ ಹೇಳುವುದಕ್ಕೆ ಹೋಗುತ್ತಿದ್ದ ಹಾಗೆಯೇ ಉದ್ರೇಕಕ್ಕೆ ಒಳಗಾಗುತ್ತಾರೆ. (ನಗು)

## ಪ್ರತಿ ಇಲಾಖೆಯ ಒಟ್ಟು ಹಂಚಿಕೆಯಲ್ಲಿ ಶೇ.15 ರಷ್ಟು ಪ.ಜಾ.ಪಂ.ಕ್ಕೆ ಇರಲಿ.

ಸ್ವಾಮಿ, ನಾನು ಪ್ರಸ್ತಾಪಿಸುವುದಕ್ಕೆ ಇಷ್ಟಪಡುತ್ತಿರುವ ತುಂಬಾ ಪ್ರಮುಖವಾದ ಇಲಾಖೆಯೆಂದರೆ ಅದು ಸಮಾಜ ಕಲ್ಯಾಣ ಇಲಾಖೆ, ಅದು ತುಂಬಾ ಸೋಷಿಯಲ್ ಎಂಬುದರಲ್ಲಿ ಸಂದೇಹವಿಲ್ಲ. ಬಸವಣ್ಣನವರ ವಚನಗಳಲ್ಲಿ ಏನನ್ನು ಹೇಳಲಾಗಿದೆಯೋ ಅದನ್ನು ಸಮಾಜ ಕಲ್ಯಾಣ ಇಲಾಖೆಯು ತನ್ನ ಕಾರ್ಯಗಳಲ್ಲಿ ಪಾಲನೆ ಮಾಡುತ್ತದೆ. ಒಂದು ಕೈನಿಂದ ಮಾಡಿದ ಕೆಲಸ ಮತ್ತೊಂದು ಕೈಗೆ ಗೊತ್ತಾಗಬಾರದು ಎಂದು ಅವರು ಹೇಳಿದರು. ಸ್ವಾಮಿ, ಎಂಥಾ ನಯನಾಜೂಕಿನ ಇಲಾಖೆ ಇದು! ಈ ಇಲಾಖೆಯ ದುರಾಡಳಿತ ಈ ಇಲಾಖೆಯೊಳಗೆ ಆಳವಾಗಿ ಬೇರೂರಿಬಿಟ್ಟಿದೆ. ಹಣ ಎಲ್ಲಿಗೆ ಹೋಯಿತು, ಅದನ್ನು ಯಾರಿಗೆ ಕೊಡಲಾಯಿತು. ವಿದ್ಯಾರ್ಥಿನಿಲಯ ಇಲ್ಲದ ಕಡೆಗೆ ಹಣವನ್ನು ನೀಡಲಾಗಿದೆಯೇ ಎಂಬ ವಿಷಯಗಳನ್ನೆಲ್ಲಾ ತಿಳಿದುಕೊಳ್ಳಲು ಒಂದು ಸಮಿತಿ ರಚನೆ ಮಾಡಿದ ಹೊರತು ಅದನ್ನು ಕಂಡುಹಿಡಿಯೋದಕ್ಕಂತೂ ಸಾಧ್ಯವಿಲ್ಲ. ಸ್ವಾಮಿ, ಒಂದು ಪ್ರಕರಣದಲ್ಲಿ, ವಿದ್ಯಾರ್ಥಿನಿಲಯಕ್ಕಾಗಿ ಗಣ್ಯರೊಬ್ಬರಿಗೆ 6,000 ರೂಪಾಯಿಗಳನ್ನು ಸಂದಾಯ ಮಾಡಲಾಗಿದೆ, ಆದರೆ ಆ ಸ್ಥಳದಲ್ಲಿ ಯಾವ ವಿದ್ಯಾರ್ಥಿನಿಲಯವೂ ಇಲ್ಲ. ಮತ್ತೊಂದು ಪ್ರಕರಣದಲ್ಲಿ ಈಗಾಗಲೇ ವಿದ್ಯಾರ್ಥಿನಿಲಯ ಇದ್ದಲ್ಲೇ ಇನ್ನೊಂದು ವಿದ್ಯಾರ್ಥಿನಿಲಯ ಪ್ರಾರಂಭಿಸಲು ಮತ್ತೋರ್ವ ಗಣ್ಯರು 8000 ರೂ.ಗಳನ್ನು ಪಡೆದಿದ್ದಾರೆ. ಸ್ವಾಮಿ, ಈ ಗೃಹ ಉಪಮಂತ್ರಿ ಇಲ್ಲಿಯೇ ಇದ್ದಾರೆ. ಅವರು ಯಾಕೆ ಮಂತ್ರಿಯಾಗುವುದಕ್ಕೆ ಪ್ರಯತ್ನಿಸಬಾರದು? ಉಪ-ಮಂತ್ರಿಯಾಗಿರುವ ಅವರ ಸ್ನೇಹಿತ ಈಗ ಒಬ್ಬ ಮಂತ್ರಿ (ನಗು).

**ಶ್ರೀ ವೀರೇಂದ್ರ ಪಾಟೀಲ್** (ಅಬ್ಕಾರಿ ಮತ್ತು ಪಾನನಿಷೇಧ ಮಂತ್ರಿ):- ಮಂತ್ರಿಯಾಗುವುದಕ್ಕೆ ನನಗೆ ಮೂರು ವರ್ಷ ಬೇಕಾಯಿತು. (ನಗು)

**ಶ್ರೀ ಬಿ. ಶ್ಯಾಮಸುಂದರ್**:- ಆದರೆ, ಒಂದೇ ರಾತ್ರಿಯಲ್ಲಿ ಮಂತ್ರಿಯಾಗುವ ಅದೃಷ್ಟವಂತ ಜನರೂ ಇದ್ದಾರೆ. (ನಗು)

ಸ್ವಾಮಿ, ಈ ಉಪಮಂತ್ರಿ ಮತ್ತು ಸಮಾಜ ಕಲ್ಯಾಣ ಖಾತೆಯ ಪ್ರಭಾರದಲ್ಲಿರುವ ಮಂತ್ರಿ, ಇವರು ಮಂಡ್ಯ ಜಿಲ್ಲೆಯ ಒಂದು ಸ್ಥಳಕ್ಕೆ ಹೋಗಿ ಪರಿಶಿಷ್ಟ ಜಾತಿ ವಿದ್ಯಾರ್ಥಿನಿಲಯದ ಶಂಕುಸ್ಥಾಪನೆಯ ಅಡಿಗಲ್ಲು ನೆಟ್ಟರು. ಒಂದು ಸುಂದರ ಬೆಳಿಗ್ಗೆ, ಆ ಪ್ರಭಾರಿ ಮಂತ್ರಿ ಎಲ್ಲವನ್ನೂ ಸಂಪೂರ್ಣವಾಗಿ ಮರೆತುಬಿಟ್ಟರು. ಆ ಅಡಿಗಲ್ಲು ಇನ್ನೂ ಅಲ್ಲಿಯೇ ತಾನೊಂದೇ ಒಂಟಿಯಾಗಿ ನಿಂತಿದೆ. ಅವರು ಅದರ ಬಗ್ಗೆ ಮರೆತು ಮತ್ತೊಬ್ಬ ವ್ಯಕ್ತಿಯನ್ನು ಕರೆದರು. ಅವರ ಹೆಸರೂ ಕೂಡ ರಾಚಯ್ಯ, ಅವರಿಗೆ ವಿದ್ಯಾರ್ಥಿನಿಲಯಕ್ಕಾಗಿ 8000 ರೂ.ಗಳನ್ನು ಮಂಜೂರು ಮಾಡಿದರು. ಸ್ವಾಮಿ, ನನ್ನ ಗುಲ್ಬರ್ಗ ಜಿಲ್ಲೆಯಲ್ಲಿ ಸುಮಾರು 300 ವಿದ್ಯಾರ್ಥಿಗಳಿರುವ ಒಂದು ವಿದ್ಯಾರ್ಥಿನಿಲಯವಿದೆ. ಅವರು ಹಣಕ್ಕಾಗಿ ಪರದಾಡುತ್ತಿದ್ದಾರೆ ಮತ್ತು ವಿದ್ಯಾರ್ಥಿನಿಲಯ ಕಟ್ಟಡವನ್ನು ಖರೀದಿಸುವುದಕ್ಕೆ

ನಿಧಿಗಾಗಿ ಸರ್ಕಾರಕ್ಕೆ ಬರೆದುಕೊಂಡಿದ್ದಾರೆ. ಆದರೆ ಅದನ್ನು ಪಡೆಯಲು ಸಾಧ್ಯವಾಗಿಲ್ಲ. ಇಲ್ಲಿಯೇ ಬೆಂಗಳೂರಿನ ಮಾಗಡಿ ರಸ್ತೆಯಲ್ಲಿ ವಿದ್ಯಾರ್ಥಿನಿಲಯ ಕಟ್ಟಡಕ್ಕಾಗಿ ಎರಡು ಲಕ್ಷ ರೂಪಾಯಿಗಳನ್ನು ವಿನಿಯೋಗಿಸಲಾಗಿದೆ. ಚಿತ್ರದುರ್ಗದಲ್ಲಿ, ಕೆಲವೇ ಕೆಲವು ವಿದ್ಯಾರ್ಥಿಗಳಿರೋ ಕಡೆ ಒಂದು ಲಕ್ಷ ವಿನಿಯೋಗಿಸಿದ್ದಾರೆ. ನೆಲಮಂಗದಲ್ಲಿ, 32 ವಿದ್ಯಾರ್ಥಿಗಳಿರೋಕಡೆ ವಿದ್ಯಾರ್ಥಿನಿಲಯ ಕಟ್ಟಡಕ್ಕಾಗಿ ಒಂದು ಲಕ್ಷಕ್ಕಿಂತ ಹೆಚ್ಚು ರೂಪಾಯಿಗಳನ್ನು ಅವರು ವಿನಿಯೋಗಿಸಿದ್ದಾರೆ. ಸ್ವಾಮಿ, ಹಾಗಾದರೆ ಏನಿದೆಲ್ಲಾ ? ಈ ವಿಷಯವನ್ನು ಅರಿಯೋದಿಕ್ಕೆ ಒಂದು ಸಮಿತಿಯನ್ನು ರಚನೆ ಮಾಡಲು ಈ ಸರ್ಕಾರಕ್ಕೆ ಒತ್ತಾಯ ಮಾಡುತ್ತೇನೆ. ಅವುಗಳನ್ನೆಲ್ಲಾ ಸದನದ ಮುಂದಿಟ್ಟಾಗ ಇರುವ ಸಂಗತಿಗಳನ್ನು ತಿಳಿದುಕೊಳ್ಳಲು ವಿರೋಧಪಕ್ಷದ ಸದಸ್ಯರಿಗೆ ಹಾಗೂ ಖಜಾನೆ ಶಾಖೆಗಳಿಗೆ ಅನುಕೂಲವಾಗುತ್ತದೆ.

ಸ್ವಾಮಿ, ತೀರಾ ಇತೀಚೆಗೆ, ಆಂಧ್ರ ಮುಖ್ಯಮಂತ್ರಿಯಾದ ಶ್ರೀ ಸಂಜೀವಯ್ಯನವರು, ಆಂಧ್ರ ವಿಧಾನಸಭೆಯಲ್ಲಿ ಹಲವು ವಿಷಯಗಳನ್ನು ಘೋಷಣೆ ಮಾಡುವಷ್ಟು ದಯಾಳುವಾಗಿದ್ದರು. ಅವೆಂದರೆ, ಪರಿಶಿಷ್ಟ ಜಾತಿಯವರಿಗೆ ಸಂಬಂಧಪಡುವಷ್ಟರ ಮಟ್ಟಿಗೆ, ಸರ್ಕಾರಿ ಸೇವೆಗೆ ಸೇರಲು ವಯೋಮಿತಿ ಇರುವುದಿಲ್ಲ. ವಿದ್ಯಾರ್ಥಿ ವೇತನಗಳನ್ನು ಪಡೆಯುವುದಕ್ಕೆ ಕೂಡ ವಯೋಮಿತಿಯಿಲ್ಲ. ಮೂರನೆಯದಾಗಿ, ಎಲ್ಲಾ ಖಾಲಿ ಹುದ್ದೆಗಳನ್ನು ಭವಿಷ್ಯದಲ್ಲಿ ಹರಿಜನರನ್ನು ನೇಮಕ ಮಾಡುವುದಕ್ಕಾಗಿ ಉಳಿಸಿಕೊಂಡಿರಬೇಕು. ಹರಿಜನ ಅಭ್ಯರ್ಥಿಗಳು ಲಭ್ಯವಿಲ್ಲವೆಂಬ ನೆಪದ ಮೇಲೆ ಅವುಗಳನ್ನು ಭರ್ತಿ ಮಾಡಬಾರದು. ಸ್ಪರ್ಧಾತ್ಮಕ ಪರೀಕ್ಷಾ ಸಂದರ್ಭದಲ್ಲಿಯೂ ಕೂಡ, ಸಾಮಾನ್ಯ ಅಭ್ಯರ್ಥಿಗಳನ್ನು ಬಿಟ್ಟು ಕೇವಲ ಪರಿಶಿಷ್ಟ ಜಾತಿಗಳ ನಡುವೆಯೇ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ನಡೆಸಬೇಕೆಂದು ಆ ಸರ್ಕಾರ ಘೋಷಣೆ ಮಾಡಿತು.

ಸ್ವಾಮಿ, ಈ ರಾಜ್ಯದಲ್ಲಿ ಶುಲ್ಕ ವಿನಾಯಿತಿಯನ್ನೇ ತೆಗೆದುಹಾಕಲಾಗಿದೆ. ಇಲ್ಲಿ ಇಬ್ಬರು ಮಂತ್ರಿಗಳಿದ್ದಾರೆ, ಇದು ಅನ್ವಯಿಸುತ್ತದೆ ಎಂದು ಒಬ್ಬರು ಹೇಳುತ್ತಾರೆ. ಇದು ಅನ್ವಯಿಸುವುದಿಲ್ಲ ಎಂದು ಮತ್ತೊಬ್ಬ ಮಂತ್ರಿ ಹೇಳುತ್ತಾರೆ. ಮಂತ್ರಿಮಂಡಲದಲ್ಲಿ ಯಾವಾಗಲೇ ಆಗಲಿ, ಏನಾದರೂ ಭಿನ್ನಾಭಿಪ್ರಾಯಗಳಿದ್ದರೆ ಆ ಮಂತ್ರಿ ರಾಜಿನಾಮೆ ಕೊಡಬೇಕು. ಈ ನಿಯಮ ಎಲ್ಲಾ ಕಡೆಯೂ ಇದೆ.

ಸ್ವಾಮಿ, ನನ್ನ ಸಲಹೆ ಏನೆಂದರೆ, ಸರ್ಕಾರದ ಪ್ರತಿಯೊಂದು ಇಲಾಖೆಯ ಒಟ್ಟು ಹಂಚಿಕೆಯಲ್ಲಿ ಶೇಕಡಾ 15ರಷ್ಟನ್ನು ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ವರ್ಗಗಳ ಜನರ ಕಲ್ಯಾಣಕ್ಕೆ ಮೀಸಲಾಗಿಡಬೇಕು. ಇದನ್ನು ಮಾಡದಿದ್ದರೆ, ಈ ಜನರನ್ನು ಮೇಲೆತ್ತುವ ಆಸೆಯೇ ಇಲ್ಲವೆಂದಾಗುತ್ತದೆ.

ಕೊನೆಯದಾಗಿ, ಸ್ವಾಮಿ, ನಾನು ಬರೆದಿರುವ ಒಂದು ವಾಕ್ಯ ನನ್ನ ಬಳಿ ಇದೆ. ಅದನ್ನು ಓದಿ ನನ್ನ ಮಾತನ್ನು ಮುಗಿಸುತ್ತೇನೆ.

*"ಆಡುವೆವು ನಾವು ಆಲಿಸುವೆವು ನಾವು,*

*ಭೂಮಂಡಲದೆಲ್ಲಾ ವ್ಯವಸ್ಥೆಗಳು ಬಿರುಕುಬಿಟ್ಟರೂ:*

*ಆಡಿಸಿಕೊಳ್ಳಲಾರೆವು ಒಂದು ಮಾತನು,*

*ಹಿಂಪಡೆಯಲಾರೆವು ಒಂದಕ್ಷರವನು;*

*ಸುಳ್ಳುಗಾರರು ಹೆದರಲಿ ಬಿಡಿ, ಹೇಡಿಗಳು ಸುರುಟಿಕೊಳ್ಳಲಿ ಬಿಡಿ,*

*ವಿಶ್ವಾಸಘಾತಕರು ಓಡಿ ಹೋಗಲಿ ಬಿಡಿ;*

*ಯೋಚಿಸುವ ಧೈರ್ಯವೇನೇ ಇದ್ದರೂ ನಮ್ಮಲ್ಲಿ,*

*ನಮ್ಮ ಮಾತಿನಲ್ಲೂ ಕೂಡ ಆ ಧೈರ್ಯವಿರಲಿ"*

ಸ್ವಾಮಿ, ಸಮಾಜ ಕಲ್ಯಾಣ ಇಲಾಖೆಯಲ್ಲಿನ ದುರಾಡಳಿತವನ್ನು ತನಿಖೆ ಮಾಡಲು ನಾನು ಒಂದು ಸಮಿತಿಯನ್ನು ರಚಿಸಲು ಕೋರಿದ್ದೇನೆ. ಒಂದು ಪಕ್ಷ, ಅದು ನೆರವೇರದಿದ್ದರೆ; ಅದಕ್ಕಾಗಿ ನಾನೊಂದು ಪರಿಹಾರವನ್ನು ಕಂಡುಕೊಂಡಿದ್ದೇನೆ. ಅವರು ಕ್ರಮ ಕೈಗೊಳ್ಳದಿದ್ದರೆ, ನಾನು ನ್ಯಾಯಾಲಯಕ್ಕೆ ಹೋಗುತ್ತೇನೆ, ನಂತರ ರಾಜ್ಯಪಾಲರ ಬಳಿ ಹೋಗುತ್ತೇನೆ, ರಾಷ್ಟ್ರಾಧ್ಯಕ್ಷರ ಬಳಿ ಹೋಗುತ್ತೇನೆ, ಅವರೆಲ್ಲರ ಮುಂದೆ ಈ ವಿಷಯಗಳನ್ನು ಇಡುತ್ತೇನೆ.

**ಶ್ರೀ ಎನ್ ಹುಚ್ಚ ಮಾಸ್ತಿಗೌಡ (ಚಂದ್ರಶೇಖರಪುರ):**– ಮಾನ್ಯ ಅಧ್ಯಕ್ಷರೇ, ಈ ದಿವಸ ಮಾನ್ಯ ಅರ್ಥ ಸಚಿವರು ನಮ್ಮ ಮುಂದೆ ಮಂಡಿಸಿರತಕ್ಕಂಥ ಹಣಕಾಸಿನ ಆಯ–ವ್ಯಯ ಪಟ್ಟಿಯನ್ನು ನಾನು ಅನುಮೋದಿಸುತ್ತೇನೆ. ಈ ಬಗ್ಗೆ ಒಂದೆರಡು ಸಲಹೆಗಳನ್ನು ಕೊಡುತ್ತೇನೆ. ಸ್ವಾಮಿ ನಮ್ಮ ಸ್ನೇಹಿತರು ಎದುರು ಪಕ್ಷದಲ್ಲಿ ಕುಳಿತು ಹೇಳತಕ್ಕ ಟೀಕೆಗಳು ಎಲ್ಲವು ಸುಳ್ಳು ಎಂದು ಹೇಳಲು ನಾನು ಇಚ್ಛೆಪಡುವುದಿಲ್ಲ. ಅವರು ಬಹಳ ಉತ್ಪ್ರೇಕ್ಷೆ ಮಾಡಿ ಹೇಳುತ್ತಾರೆ. ಹೆಚ್ಚಾಗಿ ಇದರಲ್ಲಿ ಸತ್ಯಾಂಶವಿದೆಯೇ ಇಲ್ಲವೇ ಎನ್ನುವ ರೀತಿಯಲ್ಲಿ ಅಷ್ಟು ಉತ್ಪ್ರೇಕ್ಷೆ ಮಾಡಿ ಹೇಳುತ್ತಾರೆ ಎಂಬುದು ನಿಜ. ವಾದ ಮಾಡುವಾಗ್ಗೆ ಸತ್ಯಾಂಶವನ್ನು ಗ್ರಹಿಸಿ ಸರಕಾರಕ್ಕೆ ರಚನಾತ್ಮಕ ಸಲಹೆ ಮಾಡಬೇಕು. ಮತ್ತು ಅಂಥಾದ್ದನ್ನು ಸರಕಾರ ಗಮನದಲ್ಲಿಟ್ಟುಕೊಂಡು ಕೆಲಸ ಮಾಡತಕ್ಕದ್ದು ಅಗತ್ಯ. ಈ ಪಕ್ಷದಲ್ಲಿಯೇ ಇರಲಿ, ಎದುರು ಪಕ್ಷದಲ್ಲಿಯೇ ಇರಲಿ, ರಚನಾತ್ಮಕ ಸಲಹೆಗಳನ್ನು ಮಾಡಿ, ಸರಕಾರದಲ್ಲಿರುವ ಅಲ್ಪ ಸ್ವಲ್ಪ ದೋಷವನ್ನು ದೂಷಿಸಬೇಕಾದುದು ಎಲ್ಲರ ಕರ್ತವ್ಯ. ಟೀಕೆ ಮಾಡುವಾಗ ಈ ಅಂಶವನ್ನು ಗಮನದಲ್ಲಿಡಬೇಕಾದುದು ಅಗತ್ಯ. ಆದರೆ ಈಗ ತಾನೆ ಮಾತನಾಡಿದ ಶ್ರೀ ಶ್ಯಾಮ ಸುಂದರ್ ಅವರು ಮಾತನಾಡುತ್ತಾ ಹಿಂದುಳಿದ ವರ್ಗದವರ ಬಗ್ಗೆ ಅನುಸೂಚಿತ ಪಂಗಡಗಳ ಬಗ್ಗೆ ಬಹಳ ಅನ್ಯಾಯವಾಗಿದೆ. ಅವರಿಗೆ ನ್ಯಾಯವಾಗಿ ದೊರೆಯಬೇಕಾದ ಸೌಲಭ್ಯ ದೊರೆಯುತ್ತಿಲ್ಲ ಎಂದು

ಕಟುವಾಗಿ ಟೀಕೆ ಮಾಡಿದರು. ಅವರ ಟೀಕೆಯಲ್ಲಿ ಅಷ್ಟು ಸತ್ಯಾಂಶವಿಲ್ಲ. ಕಳೆದ 13 ವರ್ಷಗಳಲ್ಲಿ ಸ್ವಾತಂತ್ರ್ಯ ಬಂದ ಮೇಲೆ ಹಿಂದುಳಿದ ಜನಾಂಗದ ಅಭಿವೃದ್ಧಿಯ ಬಗ್ಗೆ ಕಾಂಗ್ರೆಸ್ ಸರಕಾರ ಅನೇಕ ಕೆಲಸ-ಕಾರ್ಯಗಳನ್ನೂ ಮಾಡಿದೆ. ಏನೂ ಮಾಡಿಲ್ಲ ಎಂದು ಹೇಳುವುದು ಸರಿಯಲ್ಲ.

ನಮಗೆ ಸ್ವಾತಂತ್ರ್ಯ ಬಂದು ಹದಿಮೂರು ವರ್ಷಗಳಾದುವು. ಸ್ವಾತಂತ್ರ ಬಂದಮೇಲೆ ಮತ್ತು ಸ್ವಾತಂತ್ರ್ಯ ಬರುವುದಕ್ಕೆ ಮುಂಚೆಯೂ ಸಹ ಕಾಂಗ್ರೆಸ್ ಸಂಸ್ಥೆ ಹಿಂದುಳಿದಿರತಕ್ಕ ಕೋಮಿನವರಿಗೆ ಅದರಲ್ಲಿಯೂ ಅನುಸೂಚಿತ ಪಂಗಡದ ಜನಗಳಿಗೆ ಸಮಾಜದಲ್ಲಿ ಸ್ಥಾನಮಾನವನ್ನು ದೊರಕಿಸಿಕೊಡಬೇಕು ಎನ್ನುವುದನ್ನು ಮುಖ್ಯ ಧ್ಯೇಯವಾಗಿಟ್ಟುಕೊಂಡು ಕೆಲಸ ಮಾಡಿಕೊಂಡು ಬಂದಿದೆ. ಹಳ್ಳಿಗಳಲ್ಲಿರುವ ಈ ಜನ ಸಮಾಜದಲ್ಲಿ ಇತರರ ಜೊತೆಯಲ್ಲಿ ಸೇರುವಂಥ ಪರಿಸ್ಥಿತಿ ಬಂದಿದೆ. ನಾವು ಧೈರ್ಯವಾಗಿ ಅವರೊಡನೊಡಗೂಡಿ ಕೆಲಸ ಮಾಡಬೇಕು ಎನ್ನುವ ಮನಸ್ಸುಂಟಾಗಿರುವುದು ದೊಡ್ಡದು ಎಂದು ಭಾವಿಸುತ್ತೇನೆ. ನಮ್ಮಲ್ಲಿ ಈ ಜನರನ್ನೂ ದೂರದಲ್ಲಿ ನೋಡಿದರೂ ಮೈಲಿಗೆ ಆಯಿತು ಎಂದು ಸ್ನಾನ ಮಾಡುವಂಥ ಪದ್ಧತಿ ಇದ್ದದ್ದು ಹೋಗಿ, ಜೊತೆಯಲ್ಲಿ ಕುಳಿತು ನಾವೆಲ್ಲರೂ ಒಟ್ಟಿಗೆ ಕೆಲಸ ಮಾಡುವಂಥ ಭಾಗ್ಯವಾದರೂ ಉಂಟಾಗಿದೆಯಲ್ಲ ಎಂದು ಸಂತೋಷಪಡಬೇಕು. ಅವರ ವಿಚಾರದಲ್ಲಿ ಮಾಡಬೇಕಾದ ಕೆಲಸ ಇನ್ನೂ ಬಹಳವಿದೆ. ಅದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಅವರ ಮಕ್ಕಳಿಗೆ ವಿದ್ಯಾಭ್ಯಾಸ ಕೊಡುವುದಕ್ಕೆ, ಅವರ ಬಡತನವನ್ನು ಹೋಗಲಾಡಿಸುವುದಕ್ಕೆ ಬೇಕಾದ ಕಾರ್ಯಕ್ರಮಗಳನ್ನು ಕೈಕೊಳ್ಳಬೇಕಾದ್ದು ಬಹಳವಿದೆ. ನಿನ್ನೆಯ ದಿನ ಶ್ರೀಮಾನ್ ದೇವರಾಜ ಅರಸ್‌ರವರು ಹೇಳಿದ ಹಾಗೆ ಅವರಿಗೆ ಸುಮ್ಮನೆ ಜಮೀನು ಕೊಟ್ಟರೆ ಸಾಕಾಗುವುದಿಲ್ಲ, ಅವರು ಒಂದು ಕಡೆ ನೆಲಸುವ ಹಾಗೆ ಮಾಡಿ, ಅವರ ಜೀವನಕ್ಕೆ ಸಂಪಾದನೆಯ ಮಾರ್ಗವನ್ನು ಕಲ್ಪಿಸಿಕೊಡಬೇಕು. ಆ ರೀತಿಯ ಕೆಲಸ-ಕಾರ್ಯಗಳನ್ನು ಮಾಡಿದರೆ ಮಾತ್ರ ಆ ಜನ ಅಭಿವೃದ್ಧಿಗೆ ಬರುವುದಕ್ಕೆ ಸಾಧ್ಯ. ಜಮೀನನ್ನು ಮಾತ್ರ ಕೊಟ್ಟರೆ, ಅದರ ವ್ಯವಸಾಯಕ್ಕೆ ಬೇಕಾದ ಸಲಕರಣೆಗಳನ್ನೊದಗಿಸಿಕೊಳ್ಳಲು ಸಾಲಮಾಡಿ, ಆ ಸಾಲವನ್ನು ತೀರಿಸಲು ಜಮೀನನ್ನು ಮಾರಬೇಕಾಗುತ್ತದೆ. ಅವರು ನಿಜವಾಗಿಯೂ ಭೂಮಿಯನ್ನು ನಂಬಿಕೊಂಡು ಜೀವನ ಮಾಡುವುದಕ್ಕೆ ಮಾರ್ಗ ಮಾಡಬೇಕಾದರೆ ಅವರಿಗೆ ಎತ್ತು, ಗಾಡಿ ಮತ್ತು ಇತರ ಸೌಲಭ್ಯಗಳನ್ನು ಕೊಟ್ಟು ಅವರು ನೆಲೆಗೊಳ್ಳುವಂತೆ ಮಾಡಬೇಕು. ಸಾವಿರ ಜನಗಳಿಗೆ ಬರೀ ಜಮೀನನ್ನು ಕೊಡುವುದಕ್ಕೆ ಬದಲಾಗಿ ಎಲ್ಲ ಸೌಕರ್ಯಗಳನ್ನು ಕಲ್ಪಿಸಿ ನೂರು ಜನ ನೆಲೆಗೊಳ್ಳುವಂತೆ ಮಾಡಲಿ ಆ ಕೆಲಸವನ್ನು ನಾನು ಒಪ್ಪುತ್ತೇನೆ. ಶ್ರೀಮಾನ್ ಶ್ಯಾಮಸುಂದರ್ ಅವರು ಹೇಳಿದಹಾಗೆ ಸಂಪೂರ್ಣವಾಗಿ ಏನನ್ನೂ ಮಾಡಿಲ್ಲ, ಅವರಿಗೆ ಬಹಳ ತೊಂದರೆಯಾಗಿದೆ ಎನ್ನುವುದನ್ನು ನಾನು ಒಪ್ಪಲಾರೆ.

## ಅಸ್ಪೃಶ್ಯತೆ, ಮೀಸಲಾತಿ ಮತ್ತು 17ನೇ ಅನುಚ್ಛೇದ ಚರ್ಚೆ

**ಶ್ರೀ ಬಿ. ಶ್ಯಾಮಸುಂದರ್:–** ಮಾನ್ಯರೇ, ನಾವು ಸಭಾಧ್ಯಕ್ಷರಿಂದ ಎಲ್ಲಾ ನಿರ್ಣಯಗಳನ್ನು ಪಡೆಯಲು ಬಯಸುತ್ತೇವೆ. ಈ ವಿಧೇಯಕವು 17ನೇ ಅನುಚ್ಛೇದಕ್ಕೆ ಅಧಿಕಾರೇತವಾಗಿರುತ್ತದೆ ಎಂಬುದು ನನ್ನ ಕ್ರಿಯಾಲೋಪ ಆಗಿದೆ. ಇದರಲ್ಲಿ:

"ಅಸ್ಪೃಶ್ಯತೆಯನ್ನು ಕೊನೆಗಾಣಿಸಲಾಗಿದ್ದು ಇದರ ಯಾವುದೇ ರೂಪದಲ್ಲಿನ ಆಚರಣೆಯು ನಿಷಿದ್ಧವಾಗಿರುತ್ತದೆ. 'ಅಸ್ಪೃಶ್ಯತೆ'ಯಿಂದ ಉಂಟಾಗುವ ಯಾವುದೇ ಅಸಮರ್ಥತೆಯ ಪ್ರವರ್ತನೆಯು ಕಾನೂನಿಗನುಸಾರವಾಗಿ ದಂಡನೀಯವಾದ ಅಪರಾಧವಾಗತಕ್ಕದ್ದು" ಎಂಬುದಾಗಿ ಹೇಳಿರುತ್ತದೆ.

ಇದರಲ್ಲಿ 'ಯಾವುದೇ ರೂಪದಲ್ಲಿ' ಎಂದು ಹೇಳಿರುತ್ತದೆ. ಇದರಲ್ಲಿ ಇತರ ಜನರಿಂದ ನಿರ್ದಿಷ್ಟ ವರ್ಗದ ಜನರನ್ನು ರೂಪಿಸಲಾಗಿದೆ ಹಾಗೂ ವರ್ಗೀಕರಿಸಲಾಗಿದೆ. ಹೀಗಾಗಿ ಕೆಲವು ವರ್ಗದ ಜನರನ್ನು ಅಸ್ಪೃಶ್ಯರೆಂದು ವರ್ಗೀಕರಿಸಿ ಅವರಿಗೆ ಮೀಸಲಾತಿಯನ್ನು ನೀಡುವುದು ಸ್ವಯಂಚಾಲಿತವಾಗಿ 17ನೇ ಅನುಚ್ಛೇದಕ್ಕೆ ವಿರುದ್ಧವಾಗುತ್ತದೆ.

**ಶ್ರೀ ಆರ್. ಚೆನ್ನಿಗರಾಮಯ್ಯ (ಮಧುಗಿರಿ, ಪ.ಜಾ. ಮೀಸಲು):–** ಮಾನ್ಯರೇ, ಪರಿಶಿಷ್ಟ ಜಾತಿಗಳಲ್ಲಿ ಬರುವ ಪಂಗಡದ ಎಲ್ಲರೂ ಅಸ್ಪೃಶ್ಯರು ಆಗಿದ್ದಾರೆ ಎಂಬುದಾಗಿ ನನ್ನ ಸ್ನೇಹಿತರು ಭಾವಿಸಿದ್ದಾರೆ. ಆದರೆ ಅದು ಹಾಗಲ್ಲ. ಉತ್ತರ ಭಾರತದಲ್ಲಿ ಪರಿಶಿಷ್ಟ ಜಾತಿಗಳನ್ನು ಅಸ್ಪೃಶ್ಯರು ಎಂದು ಕರೆಯುತ್ತಾರೆ. ಮೈಸೂರು ರಾಜ್ಯದಲ್ಲಿ ಬಹಳ ಹಿಂದಿನಿಂದಲೂ ಅವರನ್ನು ದಲಿತ ವರ್ಗದವರೆಂದು ಕರೆಯುತ್ತಿದ್ದಾರೆ. ಅವರಲ್ಲಿ ಅಸ್ಪೃಶ್ಯರಲ್ಲದವರು ಸಹ ಇದ್ದಾರೆ. ಇದೇ ಪದವನ್ನು ಪರಿಶಿಷ್ಟ ಜಾತಿಗಳೆಂದು ವರ್ಗೀಕರಿಸಲಾಗಿದೆ. ಅಂದರೆ ಅದರಲ್ಲಿ ಅಸ್ಪೃಶ್ಯರನ್ನು ಮಾತ್ರ ಸೇರಿಸಲಾಗಿದೆ ಎಂಬುದಾಗಿ ಅದರರ್ಥವಲ್ಲ. ಇದರಲ್ಲಿ ಬೋವಿ, ಲಂಬಾಣಿ ಮುಂತಾದವರಂಥ ಅಸ್ಪೃಶ್ಯರಲ್ಲದವರು ಸಹ ಇದ್ದಾರೆ. ಮೈಸೂರು ರಾಜ್ಯದಲ್ಲಿನ ಪರಿಶಿಷ್ಟ ಜಾತಿಗಳಲ್ಲಿ ಅಸ್ಪೃಶ್ಯರಲ್ಲದವರು ಸಹ ಇದ್ದಾರೆ. ಆದ್ದರಿಂದ ನನ್ನ ಸ್ನೇಹಿತರು ಎತ್ತಿರುವ ಕ್ರಿಯಾಲೋಪವು ಸಮರ್ಥನೀಯವಾಗಿರುವುದಿಲ್ಲ.

**ಶ್ರೀ ಎನ್. ರಾಚಯ್ಯ (ಕೃಷಿ ಮತ್ತು ಸಮಾಜ ಕಲ್ಯಾಣ ಸಚಿವರು):–** ಮಾನ್ಯರೆ, ನನ್ನ ಸ್ನೇಹಿತರಾದ ಸನ್ಮಾನ್ಯ ಶ್ರೀ ಶ್ಯಾಮಸುಂದರ್ ಹಾಗೂ ಚೆನ್ನಿಗರಾಮಯ್ಯ ಅವರ ವಾದವನ್ನು ನಾನು ಒಪ್ಪುವುದಿಲ್ಲ. ಯಾಕೆಂದರೆ 17ನೇ ಅನುಚ್ಛೇದದ ಅಡಿಯಲ್ಲಿ ಅಸ್ಪೃಶ್ಯತೆ ಆಚರಣೆಯನ್ನು ರದ್ದುಪಡಿಸಲಾಗಿದೆ. ಆದರೆ, ಇದೇ ಆಧಾರದ ಮೇಲೆ ನಾವು, ಸಂಸತ್ತಿನಲ್ಲಿ ಮತ್ತು ರಾಜ್ಯದ ವಿಧಾನಮಂಡಲಗಳಲ್ಲಿ ಹಾಗೂ ಸಂಬಂಧಪಟ್ಟ ರಾಜ್ಯಗಳ ಸ್ಥಳೀಯ ಸಂಸ್ಥೆಗಳಲ್ಲಿ ರಾಜಕೀಯ ಮೀಸಲಾತಿ ಪಡೆಯಲು ಹಕ್ಕುಳ್ಳವರಾಗಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನರನ್ನು ಪ್ರತ್ಯೇಕಿಸುವಂತಿಲ್ಲ. 16(4), 15 (4) ಮತ್ತು 46ನೇ ಅನುಚ್ಛೇದಗಳ ಅಡಿಯಲ್ಲಿಯೂ ಸಹ

ದುರ್ಬಲವರ್ಗದವರು ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಪಂಗಡಗಳಲ್ಲಿ ಬರುತ್ತಾರೆ. ಹಾಗಾಗಿ, ಅಸ್ಪೃಶ್ಯತೆ ಆಚರಣೆಯನ್ನು ರದ್ದುಪಡಿಸಲಾಗಿದ್ದರೂ ಕೂಡ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರು ದುರ್ಬಲವರ್ಗದಲ್ಲಿ ಬರುತ್ತಾರೆ. ಯಾಕೆಂದರೆ ಇವರು ಅತ್ಯಂತ ಹಿಂದುಳಿದಿರುವವರು ಆಗಿರುತ್ತಾರೆ. ಆದ್ದರಿಂದ ಇವರಿಗೆ ಲೋಕಸಭೆ ಮತ್ತು ರಾಜ್ಯ ವಿಧಾನಮಂಡಲಗಳಲ್ಲಿ ಮೀಸಲಾತಿಯನ್ನು ಕಲ್ಪಿಸುವಂತಿರುತ್ತದೆ.

ಪರಿಶಿಷ್ಟ ಜಾತಿಗಳನ್ನು ನಿರ್ಧರಿಸುವುದರ ಸಂಬಂಧದಲ್ಲಿ, ಅಸ್ಪೃಶ್ಯತೆ ಅಡಿಯಲ್ಲಿ ಬರುವಂತಹವರನ್ನು ಮಾತ್ರ ಸೇರಿಸಬೇಕೆಂದು ಭಾರತಸರ್ಕಾರವು ರಾಜ್ಯ ಸರ್ಕಾರಕ್ಕೆ ನಿರ್ದೇಶನ ನೀಡಿದೆ. ನಾವು ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸನ್ನು ಕಳುಹಿಸಿದ್ದೇವೆ ಮತ್ತು ರಾಷ್ಟ್ರಪತಿಯವರ ಸಮ್ಮತಿಯೂ ಕೂಡ ಬರಬಹುದು. ಆ ಕಾರಣದಿಂದ, ನಾವು ಯಾವುದೇ ಅಸ್ಪೃಶ್ಯರಲ್ಲದ ಪಂಗಡವನ್ನು ಪರಿಶಿಷ್ಟ ಜಾತಿಗಳಿಗೆ ಸೇರಿಸುವಂತಿರದಿದ್ದು, ಆ ಮಟ್ಟಿಗೆ ನಾನು ಶ್ರೀ ಚೆನ್ನಿಗರಾಮಯ್ಯನವರ ವಾದವನ್ನು ಒಪ್ಪುವುದಿಲ್ಲ. ಹಿಂದಿನ ಮೈಸೂರು ಸರ್ಕಾರವು ತಪ್ಪು ಮಾಡಿದೆ. ಹಾಗಾಗಿ ಇದು ಸಂವಿಧಾನದ ಅಧಿಕಾರಾತೀತವಾಗಿರುತ್ತದೆ ಎಂಬುದಾಗಿ ಶ್ರೀ ಶ್ಯಾಮಸುಂದರ್‌ರವರು ಎತ್ತಿರುವ ಆಕ್ಷೇಪಣೆಯನ್ನು ನಾನು ಒಪ್ಪುವುದಿಲ್ಲ.

**ಶ್ರೀ ಬಿ. ಶ್ಯಾಮಸುಂದರ್:–** ನನ್ನ ಸ್ನೇಹಿತರಾದ ಶ್ರೀ ರಾಚಯ್ಯ ಅವರು 46ನೇ ಅನುಚ್ಛೇದಕ್ಕೆ ಸಂಬಂಧಪಡುವಷ್ಟರಮಟ್ಟಿಗೆ ನನ್ನ ವಾದವನ್ನು ಒಪ್ಪಿಕೊಂಡಿದ್ದಾರೆ. ಇದು ದುರ್ಬಲವರ್ಗದ ಬಗ್ಗೆ ಮಾತ್ರವಾಗಿರುತ್ತದೆ. 46ನೇ ಅನುಚ್ಛೇದವು ದುರ್ಬಲ ವರ್ಗದ ಹಿತಾಸಕ್ತಿಯನ್ನು ರಕ್ಷಿಸಲು ಇರುವ ವಿಶೇಷ ಎಚ್ಚರಿಕೆ ಬಗ್ಗೆ ಇರುವುದಾಗಿರುತ್ತದೆ. ಇದು ಮೀಸಲಾತಿಯೆಂದು ಅರ್ಥವಾಗುವುದಿಲ್ಲ. 17ನೇ ಅನುಚ್ಛೇದದಲ್ಲಿ ಅಸ್ಪೃಶ್ಯತೆಯನ್ನು ಕೊನೆಗಾಣಿಸಿರುವುದಾಗಿ ಹೇಳಲಾಗಿದ್ದು, ಅದಕ್ಕನುಸಾರವಾಗಿ, ವ್ಯಕ್ತಿ ವ್ಯಕ್ತಿ ನಡುವೆ ಭೇದಭಾವ ಮಾಡಬಾರದು, ಆದುದರಿಂದ ಈ ವಿಧೇಯಕವನ್ನು ಇಲ್ಲಿ ತರಕೂಡದು.

**ಶ್ರೀ ಬಿ.ಡಿ. ಜತ್ತಿ:–** ಮಾನ್ಯರೇ, ನೀಡಲಾಗಿರುವಂತಹ ಮೀಸಲಾತಿಯು ಅಸ್ಪೃಶ್ಯತೆಯ ಕಾರಣದಿಂದ ಅಲ್ಲವೇ ಅಲ್ಲ. 334ನೇ ಅನುಚ್ಛೇದದಡಿಯಲ್ಲಿ ಮೀಸಲಾತಿಯನ್ನು ಕಲ್ಪಿಸಲಾಗಿದೆ. ಇತ್ತೀಚೆಗೆ 334ನೇ ಅನುಚ್ಛೇದದಲ್ಲಿ ತಿದ್ದುಪಡಿ ಮಾಡಿದ್ದು ಇದನ್ನು ಸಂಸತ್ತಿನಲ್ಲಿ ಅನುಮೋದಿಸಲಾಗಿದ್ದು ಅಂಗೀಕಾರವನ್ನು ಪಡೆಯಲಾಗಿದೆ. ಈ ದೃಷ್ಟಿಯಿಂದ ನಾವು ಈ ತಿದ್ದುಪಡಿಯನ್ನು ಮಂಡಿಸಿದ್ದೇವೆ.

**ಮಾನ್ಯ ಸಭಾಪತಿಯುವರು:–** ಈ ವಿಧೇಯಕವು 17ನೇ ಅನುಚ್ಛೇದವನ್ನು ಭಂಗಿಸದಿರುವುದರಿಂದ ಅಧಿಕಾರೇತರವಾಗಿರುವುದಿಲ್ಲ. ಅಸ್ಪೃಶ್ಯತೆಯು ಸ್ಥಾನಗಳ ಮೀಸಲಾತಿಯಿಂದ ಸಂಪೂರ್ಣವಾಗಿ ಭಿನ್ನವಾಗಿದ್ದು ಕೇವಲ ಸ್ಥಾನಗಳ ಮೀಸಲಾತಿಯ ಆಧಾರದ ಮೇಲೆ ಸಮಾಜದ ವಿವಿಧ ವರ್ಗಗಳ ನಡುವೆ ತಾರತಮ್ಯ ಮಾಡಲಾಗುತ್ತಿದೆಯೆಂದು ಹೇಳುವಂತಿರುವುದಿಲ್ಲ.

**ಶ್ರೀ ಜೆ.ಬಿ. ಮಲ್ಲಾರಾಧ್ಯ**:- ಸಭಾಧ್ಯಕ್ಷರು ತಮ್ಮ ನಿರ್ಣಯವನ್ನು ನೀಡುವುದಕ್ಕೆ ಮೊದಲು ನಾನು ಹೇಳಬೇಕಾಗಿರುವುದನ್ನು ಆಲಿಸಿಕೊಳ್ಳುವಂತೆ ಅನುಚ್ಛೇದ 33ರ ಅಡಿಯಲ್ಲಿ ದಯವಿಟ್ಟು ಇದನ್ನು ನೋಡಬೇಕು.

**ಮಾನ್ಯ ಸಭಾಪತಿಯವರು**:- ನಮ್ಮ ಸಂವಿಧಾನವು ಅಸ್ಪೃಶ್ಯತೆ ನಿವಾರಣೆಗಾಗಿ ಹಾಗೂ ಸ್ಥಾನಗಳ ಮೀಸಲಾತಿ ಎರಡಕ್ಕೂ ಅವಕಾಶ ಕಲ್ಪಿಸಿದೆ. ಇಲ್ಲಿ ಕಾಲವಿಸ್ತರಣೆ ಬಗ್ಗೆ ಪ್ರಶ್ನೆ ಉದ್ಭವಿಸಿದೆ. ಆದುದರಿಂದ ಈ ವಿಧೇಯಕವು ಅಧಿಕಾರೇತ ಆಗಿದೆಯೆಂದು ನಾನು ಭಾವಿಸುವುದಿಲ್ಲ.

**ಶ್ರೀ ಜೆ.ಬಿ. ಮಲ್ಲಾರಾಧ್ಯ**:- ನಾನು ಅನುಚ್ಛೇದ 334ರ ಕಡೆ ಸದನದ ಗಮನ ಸೆಳೆಯಲು ಬಯಸುತ್ತೇನೆ. ಇದರಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ಸ್ಥಾನಗಳ ಮೀಸಲಾತಿಯ ಬಗ್ಗೆ ಆಲೋಚಿಸುವುದಿಲ್ಲ.

**ಶ್ರೀ ಎಫ್. ಹೆಚ್. ಮೋಹ್‌ಸಿನ್**:- ನಾನು ಕ್ರಿಯಾಲೋಪ ಎತ್ತುತ್ತಿದ್ದೇನೆ. ಸಭಾಧ್ಯಕ್ಷರು ಈಗಾಗಲೇ ತಮ್ಮ ನಿರ್ಣಯವನ್ನು ನೀಡಿರುವಾಗ ಮುಂದಿನ ಚರ್ಚೆ ಮಾಡುವಂತಿದೆಯೇ?

**ಶ್ರೀ ಜೆ.ಬಿ. ಮಲ್ಲಾರಾಧ್ಯ**:- ಪೀಠವು ಪರಿಗಣಿತ ತೀರ್ಮಾನಕ್ಕೆ ಬರುವುದಕ್ಕೆ ಮೊದಲು ನನ್ನ ಮಾತನ್ನು ಆಲಿಸಬೇಕೆಂದು ನಾನು ಈಗಾಗಲೇ ಹೇಳಿದ್ದೇನೆ. ನಾನು ಎದ್ದು ನಿಂತಿರುವುದು ಸಭಾಧ್ಯಕ್ಷರ ನಿರ್ಣಯದ ವಿರುದ್ಧ ಪ್ರತಿಭಟಿಸುವ ಮನೋಭಾವದಿಂದಲ್ಲ. ನಾನು ಕೇವಲ ಕೆಲವು ವಿಷಯಗಳ ಬಗ್ಗೆ ಸದನದ ಗಮನ ಸೆಳೆಯುತ್ತಿದ್ದು ಇದರಿಂದಾಗಿ ನಾವು ಸರಿಯಾದ ತೀರ್ಮಾನವನ್ನು ತೆಗೆದುಕೊಳ್ಳಬಹುದಾಗಿರುತ್ತದೆ.

ಅನುಚ್ಛೇದ 334ರಲ್ಲಿ ಸ್ಥಾನಗಳ ಮೀಸಲಾತಿ ಮತ್ತು ಇದನ್ನು ಎಷ್ಟು ದೀರ್ಘಾವಧಿವರೆಗೆ ಮುಂದುವರಿಸಬಹುದು ಎಂಬುದನ್ನು ಉಲ್ಲೇಖಿಸಿರುತ್ತದೆ. ಇದರಲ್ಲಿ ಸ್ಥಳೀಯ ಸಂಸ್ಥೆಗಳ ಬಗ್ಗೆ ಉಲ್ಲೇಖವಿಲ್ಲ. ಇದು ಸ್ಥಳೀಯ ಸಂಸ್ಥೆಗಳಿಗೆ ಅನ್ವಯಿಸುವುದಿಲ್ಲ ಎಂಬುದು ಆಕ್ಷೇಪಣೆಯ ನಿಜವಾದ ಮಹತ್ವವಾಗಿರುತ್ತದೆ.

**ಮಾನ್ಯ ಸಭಾಪತಿಯವರು**:- ತಾರ್ಕಿಕವಾಗಿ ಇದು ಅನ್ವಯಯೋಗ್ಯವಾಗಿರುತ್ತದೆ. ಸಂಸತ್ತಿನಲ್ಲಿ ಮೀಸಲಾತಿಯನ್ನು ನೀಡುವಂತಿರುವಾಗ ಇದನ್ನು ಸ್ಥಳೀಯ ಸಂಸ್ಥೆಗಳಲ್ಲಿಯು ಸಹ ನೀಡುವಂತಿರುತ್ತದೆ.

**ಶ್ರೀ ಬಿ. ಶ್ಯಾಮಸುಂದರ್**:- ಸರ್ಕಾರ ಏನನ್ನು ಹತ್ತು ವರ್ಷಗಳಿಂದ ಮಾಡಿಲ್ಲವೋ ಅದನ್ನು ಕಾನೂನುಸಮ್ಮತ ಮಾಡಲು ಈ ವಿಧೇಯಕವನ್ನು ರೂಪಿಸಲಾಗಿದೆ. ಹತ್ತು ವರ್ಷಗಳ ಹಿಂದೆ ಮಾಡಲಾಗಿರುವ ಒಂದು ಕೊಲೆಯನ್ನು ಕಾನೂನುಸಮ್ಮತ ಮಾಡಲು ಹೇಗೆ ಈ ವಿಧೇಯಕವನ್ನು ಇಲ್ಲಿ ತರುವಂತಿದೆಯೋ ಎಂಬುದು ನನಗೆ ಗೊತ್ತಿಲ್ಲ. ಇನ್ನೊಂದು ವಿಷಯ ಏನೆಂದರೆ, ಈ ರಾಜ್ಯದಲ್ಲಿ ಮೂರು ಬಗೆಯ ಅಧಿನಿಯಮಿತಿಗಳಿವೆ. ಹೈದ್ರಾಬಾದ್ ಕರ್ನಾಟಕ

ಪ್ರದೇಶದಲ್ಲಿ ಮೀಸಲಾತಿಯನ್ನು ಜಾರಿಗೊಳಿಸ ಬಹುದಾಗಿರುವ ನಿರ್ದಿಷ್ಟ ಅವಧಿಯು ಇರುವುದಿಲ್ಲ. ಒಂದೇ ರಾಜ್ಯದಲ್ಲಿ ಒಂದೇ ವಿಷಯದ ಮೇಲೆ ಎರಡು ಬೇರೆ ಬೇರೆ ಅಧಿನಿಯಮಗಳಿರಲು ಸಾಧ್ಯವೇ?

**ಮಾನ್ಯ ಸಭಾಪತಿಯವರು:-** ವಿಧೇಯಕವನ್ನು ಪರಿಶೀಲನೆಗೆ ತೆಗೆದುಕೊಳ್ಳುವಾಗ ಈ ವಿಷಯವನ್ನು ಪರ್ಯಾಲೋಚಿಸಲಾಗುವುದು. ಈಗ ಯಾವುದೇ ಕ್ರಿಯಾಲೋಪವಾಗಿರುವುದಿಲ್ಲ. ಈ ವಿಧಾನಸಭೆಯು ಪೂರ್ವಾನ್ವಯವಾಗುವಂತೆ ಜಾರಿಗೊಳಿಸಲು ಸಕ್ಷಮವಾಗಿದೆ.

**ಶ್ರೀ ಬಿ.ಡಿ.ಜತ್ತಿ:-** ವಿಧೇಯಕವು ಅಧಿಕಾರಾತೀತವಾಗಿದೆಯೋ ಅಥವಾ ಇಲ್ಲವೋ ಎಂಬುದನ್ನು ಆ ವಿಷಯವನ್ನು ನ್ಯಾಯಾಲಯಕ್ಕೆ ತೆಗೆದುಕೊಂಡು ಹೋದಾಗ ನ್ಯಾಯಾಲಯವು ಅದನ್ನು ಪರ್ಯಾಲೋಚಿಸಬೇಕಾಗುತ್ತದೆ. ವಿಧೇಯಕವನ್ನು ಇಲ್ಲಿ ತಂದಿರುವಾಗ, ನಾವು ಅದಕ್ಕೆ ಸಂಬಂಧಪಟ್ಟ ಎಲ್ಲಾ ಅಂಶಗಳನ್ನು ಪರ್ಯಾಲೋಚಿಸಿದ್ದೇವೆ ಎಂಬುದಾಗಿ ಅರ್ಥವಾಗಿರುತ್ತದೆ. ಸಂವಿಧಾನದ ಉಪಬಂಧಗಳಿಗನುಸಾರವಾಗಿ, ಈ ವಿಧೇಯಕವು ಸಿಂಧುವಾಗಿರುವುದಾಗಿ ನಾವು ಭಾವಿಸಿದ್ದೇವೆ. ಮೈಸೂರು ರಾಜ್ಯದಲ್ಲಿ ಈ ಮುಂದಿನ ಅಧಿನಿಯಮಿತಿಗಳು ಜಾರಿಯಲ್ಲಿರುವುದನ್ನು ನಾವು ಕಾಣುತ್ತೇವೆ. ಬಾಂಬೆ ಜಿಲ್ಲಾ, ಪುರಸಭೆಗಳ ಅಧಿನಿಯಮ, 1901, ಬಾಂಬೆ ಮುನಿಸಿಪಾಲ್ ಪುರಗಳ ಅಧಿನಿಯಮ, 1925, ಮೈಸೂರು ಪಟ್ಟಣ ಪುರಸಭೆಗಳ ಅಧಿನಿಯಮ, 1957, ಮೈಸೂರು ನಗರ ಸಭಾ ಅಧಿನಿಯಮ, 1933, ಮದ್ರಾಸ್ ಜಿಲ್ಲಾ ಪುರಸಭೆಗಳ ಅಧಿನಿಯಮ, 1920, ಹೈದ್ರಾಬಾದ್ ಜಿಲ್ಲಾ ಪುರಸಭೆಗಳ ಅಧಿನಿಯಮ, 1956 ಮತ್ತು ಕೊಡಗು ಪುರಸಭೆ ವಿನಿಯಮಗಳು ಈಗತಾನೆ ನಾನು ಹೇಳಿದ ನಾಲ್ಕು ಅಧಿನಿಯಮಿತಿಗಳಲ್ಲಿ, ಮೀಸಲಾತಿಗಾಗಿನ ಅವಕಾಶವು ಹತ್ತು ವರ್ಷಗಳಿಗಾಗಿ ಮಾತ್ರ ಇತ್ತು. ಈ ಅವಧಿಯು ಮುಗಿದುಹೋಗಿದೆ. 334ನೇ ಅನುಚ್ಛೇದಕ್ಕೆ ಸಂಸತ್ತಿನಿಂದ ತಿದ್ದುಪಡಿ ಮಾಡಲಾಗಿರುವುದರಿಂದ ಮೈಸೂರು ಸರ್ಕಾರವು ಪರಿಶಿಷ್ಟ ಜಾತಿಗಳಿಗೆ ಮೀಸಲಾತಿಯನ್ನು ನೀಡಲು ಈ ತಿದ್ದುಪಡಿಯನ್ನು ಮಂಡಿಸುವುದು ಅವಶ್ಯಕವಾಗಿತ್ತು. ಇದು ಈ ವಿಧೇಯಕವನ್ನು ಸಭೆಯ ಮುಂದೆ ಮಂಡಿಸಲಾಗಿರುವುದಕ್ಕೆ ಕಾರಣವಾಗಿದೆ.

**ಶ್ರೀ ಎಂ.ಸಿ. ನರಸಿಂಹನ್:-** ಮಾನ್ಯರೇ, ಕೇವಲ ಈ ಪುರಸಭೆಗಳಲ್ಲಿ ಸ್ಥಾನಗಳನ್ನು ಮೀಸಲಿಡುವುದರ ಮೂಲಕ ಪರಿಶಿಷ್ಟ ಜಾತಿಗಳಿಗೆ ಪ್ರಾತಿನಿಧ್ಯ ನೀಡುವುದು ಈ ವಿಧೇಯಕದ ಉದ್ದೇಶವಾಗಿರುವುದಿಲ್ಲ. ಏನನ್ನು ಬಿಟ್ಟುಬಿಡಲಾಗಿದೆಯೋ ಅದನ್ನು ಕಾನೂನು ಮಾನ್ಯ ಮಾಡುವುದು ಸಹ ಇದರ ಉದ್ದೇಶವಾಗಿದೆ. ಇವರುಗಳಿಗೆ ಬಹಳಷ್ಟು ಹಿಂದೆಯೇ ಈ ಮೀಸಲಾತಿಗಳಿಗಾಗಿ ಉಪಬಂಧ ಕಲ್ಪಿಸಬೇಕಿತ್ತು ಎಂಬುದನ್ನು ನೀವು ಉದ್ದೇಶಗಳ ಮತ್ತು ಕಾರಣಗಳ ವಿವರಣೆ ಮತ್ತು ಖಂಡ 6ರಲ್ಲಿ ನೋಡುವಿರಿ. ವಾಸ್ತವವಾಗಿ, ಜನವರಿ 1960ರಲ್ಲಿ ಅಂದರೆ ಹತ್ತಿರ ಹತ್ತಿರ 15 ತಿಂಗಳ ಹಿಂದೆಯೇ ಮೀಸಲಾತಿಯು ನಿಂತುಹೋಗಿರುತ್ತದೆ. ಇಷ್ಟು ತಿಂಗಳುಗಳಿಂದ ಅವರು ಏನು ಮಾಡುತ್ತಿದ್ದರು. ಇನ್ನು ಹತ್ತು ವರ್ಷಗಳವರೆಗೆ ಮೀಸಲಾತಿ ಅವಧಿ ವಿಸ್ತರಣೆಗಾಗಿ ಉಪಬಂಧ

ಕಲ್ಪಿಸುವುದಕ್ಕಾಗಿ ಸಂವಿಧಾನಕ್ಕೆ ಎಂಟನೇ ತಿದ್ದುಪಡಿಯನ್ನು ಮಾಡಿರುವಾಗ ಸರ್ಕಾರವು ಇದನ್ನು ಆಗಲೆ ಜಾರಿಗೆ ತರಬೇಕಾಗಿದ್ದದ್ದು ಅದರ ಕರ್ತವ್ಯವಾಗಿತ್ತು. ಇದನ್ನು ಅವರು ಆವಾಗಲೇ ತಂದಿದಿದ್ದರೆ, ಕೆಲವು ವಿಷಯಗಳನ್ನು ಸಿಂಧುತ್ವಗೊಳಿಸುವ ಬಗ್ಗೆ ಈ ಎಲ್ಲಾ ತೊಂದರೆಗಳು ಉದ್ಭವಿಸುತ್ತಿರಲಿಲ್ಲ. ಘಟನೆಯು ನಡೆದ ಧೀರ್ಘಕಾಲದ ತರುವಾಯ ಹಿಂಬಾಗಿಲಿನಿಂದ ಮಾಡಿರುವ ಇದನ್ನು ಜಾರಿಗೊಳಿಸಲು ಮಾಡುತ್ತಿರುವ ಪ್ರಯತ್ನವು ನಿಸ್ಸಂದೇಹವಾಗಿ ಆಕ್ಷೇಪಾರ್ಹ ವಿಧಾನವಾಗಿದೆ. ಸರ್ಕಾರವು, ಬಾಂಬೆ ಪ್ರದೇಶದಲ್ಲಿ ಚುನಾವಣೆಗಳು ಬಂದಿರುವಾಗ. ಈ ಬಗ್ಗೆ ಎಚ್ಚೆತ್ತುಕೊಂಡಿದೆಯೆಂದು ನಾನು ಭಾವಿಸಿದ್ದೇನೆ.

ಇದಲ್ಲದೆ ಇದರಲ್ಲಿ ಆಗಿರುವ ಇನ್ನೊಂದು ತುಂಬಾ ಗಂಭೀರವಾದ ಲೋಪವು ಏನೆಂದರೆ: ನನ್ನ ಸ್ನೇಹಿತರಾದ ಶ್ರೀ ಶ್ಯಾಮಸುಂದರ್ ಇವರು ಹೈದ್ರಾಬಾದ್ ಜಿಲ್ಲಾ ಪುರಸಭೆಗಳ ಅಧಿನಿಯಮದ ಬಗ್ಗೆ ನೀವು ನೆನಪಿಸಿಕೊಳ್ಳುವಂತೆ, ಇದರಲ್ಲಿ ಮೀಸಲಾತಿಯ ಸಂಬಂಧದಲ್ಲಿ ಪ್ರಸ್ತಾಪಿಸಿದ್ದು, ಯಾವುದೇ ಕಾಲಮಿತಿಯನ್ನು ಕಲ್ಪಿಸಿರುವುದಿಲ್ಲ. ಇದು ಶಾಶ್ವತವಾದ ಮೀಸಲಾತಿಯಾಗಿರುತ್ತದೆ. ವಿಧಾನಮಂಡಲದ ಮೂಲಕ ಮೀಸಲಾತಿಯನ್ನು ಯಾವುದೇ ಕಾಲದಲ್ಲಿ ರದ್ದುಪಡಿಸಬಹುದಾಗಿರುತ್ತದೆ ಮತ್ತು ಶಾಸನವು ಎಲ್ಲಿಯವರೆಗೆ ಜಾರಿಯಲ್ಲಿರುತ್ತದೆಯೋ ಅಲ್ಲಿಯವರೆಗೆ ಮೀಸಲಾತಿಯು ಮುಂದುವರಿಯುತ್ತದೆ. ಎರಡು ಪ್ರದೇಶಗಳ ನಡುವೆ ಏಕೆ ತಾರತಮ್ಯವನ್ನು ಮಾಡಬೇಕು ಎಂಬುದನ್ನು ನಾನು ಕೇಳಲು ಬಯಸುತ್ತೇನೆ. ಒಂದು ಪ್ರದೇಶದಲ್ಲಿ ಹತ್ತು ವರ್ಷಗಳಿಗಾಗಿ ಕಾಲಮಿತಿಯು ಇದ್ದು ಇನ್ನೊಂದರಲ್ಲಿ ಏಕಿರುವುದಿಲ್ಲ. ಹೈದ್ರಾಬಾದ್ ಕರ್ನಾಟಕದಲ್ಲಿರುವಂತೆ ನಾವು ಅನಿಯಮಿತ ಕಾಲದವರೆಗೆ ಏಕೆ ಮೀಸಲಾತಿಯನ್ನು ಹೊಂದಿರಬಾರದು. 334ನೇ ಅನುಚ್ಛೇದಕ್ಕೆ ತಿದ್ದುಪಡಿಯನ್ನು ಮಾಡಲಾಗಿದೆ ಎಂಬುದಾಗಿ ವಾದವನ್ನು ಮಾಡುವುದಾದರೆ ಆಗ ಹೈದ್ರಾಬಾದ್ ಅಧಿನಿಯಮದ ವ್ಯಾಪ್ತಿಯನ್ನು ಯಾತಕ್ಕೆ ಪರಿಮಿತಿಗೊಳಿಸಬಾರದು. ಈ ರೀತಿಯ ಅಸಮಂಜಸತೆಯು ಸ್ವೀಕಾರಾರ್ಹವಾಗಿರುವುದಿಲ್ಲ. ಸರ್ಕಾರವು ಈ ಬಗ್ಗೆ ಗಂಭೀರವಾಗಿಲ್ಲವೆಂದು ನಾನು ಭಾವಿಸಿದ್ದೇನೆ.

ಅವರು ಉಪಪಂಧಗಳ ಬಗ್ಗೆ ಎಚ್ಚರಿಕೆಯಿಂದ ವಿಚಾರ ಮಾಡಿರುವುದಿಲ್ಲ ಎಂಬುದು ಸ್ಪಷ್ಟವಾಗಿರುತ್ತದೆ. 1925ರ ಬಾಂಬೆ ಅಧಿನಿಯಮದಲ್ಲಿ ಮಹಿಳೆಯರ ಸ್ಥಾನಗಳ ಮೀಸಲಾತಿಗಾಗಿ ಉಪಬಂಧವನ್ನು ಕಲ್ಪಿಸಿದೆ. ನಾನು, ಈ ವಿಧೇಯಕದ ಕಾರ್ಯನಿರ್ವಾಹಕರಾಗಿರುವ ಮುಖ್ಯಮಂತ್ರಿಯವರಲ್ಲಿ ಕೇಳಬಯಸುವುದೇನೆಂದರೆ, ಇವರು ಬಾಂಬೆ ಪ್ರದೇಶದಲ್ಲಿನ ಮಹಿಳೆಯರ ಬಗ್ಗೆ ಯಾತಕ್ಕೆ ಮೃದು ಧೋರಣೆ ಹೊಂದಿರುತ್ತಾರೆ. ಅಂಥ ಮೀಸಲಾತಿಯನ್ನು ಮೈಸೂರಿಗೆ ಏಕೆ ವಿಸ್ತರಿಸಬಾರದು. ಇವರು ಮಹಿಳೆಯರಿಗಾಗಿ ಮೀಸಲಾತಿ ಕಲ್ಪಿಸುವ ಮೂಲಕ ಸಂವಾದಿ ಅಧಿನಿಯಮಗಳಿಗೆ ತಿದ್ದುಪಡಿ ಮಾಡುವ ಅವಕಾಶದ ಅನುಕೂಲವನ್ನು ಪಡೆದುಕೊಳ್ಳಬಹುದಾಗಿತ್ತು.

ಶ್ರೀ ಸಿ.ಜಿ. **ಮುಕ್ಕಣ್ಣಪ್ಪ:**– ಆ ಪ್ರದೇಶದ ಮಹಿಳೆಯರು ತೊಂದರೆ ಉಂಟು ಮಾಡುವವರಾಗಿರುತ್ತಾರೆ (ನಗು)

**ಶ್ರೀ ಎಂ.ಸಿ. ನರಸಿಂಹನ್:-** ನನ್ನ ಸ್ನೇಹಿತರಾದ ಮಲ್ಲಾರಾಧ್ಯ ಇವರು ಸರ್ಕಾರವು ಏಕರೂಪದ ವಿಧೇಯಕವನ್ನು ತರಲು ಪ್ರಯತ್ನಿಸುತ್ತಿದೆ ಮತ್ತು ಇದು ಈ ಉಪಬಂಧಗಳ ಕಡೆಗೆ ಗಮನ ಹರಿಸುತ್ತಿದೆಯೆಂಬುದನ್ನು ಸೂಚಿಸಲು ಪ್ರಯತ್ನಿಸಿದ್ದಾರೆ. ಆ ವಿಧೇಯಕವನ್ನು ಮಂಡಿಸಿದ್ದಾಗ್ಯೂ ಅದು ನಮ್ಮ ಮುಂದಿರುವುದಿಲ್ಲ. ಇದು ಏನೇ ಆಗಿರಲಿ, ನನಗೆ ತಿಳಿದಿರುವ ಮಟ್ಟಿಗೆ ವಿಧೇಯಕದಲ್ಲಿಯೂ ಕೂಡ ಬಾಂಬೆ ಅಧಿನಿಯಮದಲ್ಲಿ ಮಹಿಳೆಯರಿಗೆ ಮೀಸಲಾತಿಯನ್ನು ಕಲ್ಪಿಸಿರುವ ರೀತಿಯಲ್ಲಿ ಇವರಿಗೆ ಮೀಸಲಾತಿಯನ್ನು ಕಲ್ಪಿಸಿರುವುದಿಲ್ಲ. ಇದರ ಜೊತೆಗೆ, ಕೊಡಗು ಅಧಿನಿಯಮಕ್ಕೆ ಸಂಬಂಧಪಡುವಷ್ಟರಮಟ್ಟಿಗೆ, ಇದರಲ್ಲಿ ನಿಯಮಗಳ ಮೂಲಕ ನೇಮಕಾತಿಗಳಿಗಾಗಿ ಮತ್ತು ಚುನಾವಣೆಗಳಿಗಾಗಿ ಉಪಬಂಧ ಕಲ್ಪಿಸಿದೆ. ಆದುದರಿಂದ, ಈ ಗಳಿಗೆಯಲ್ಲಿ ಇರುವ ಬೇರೆ ಬೇರೆ ಅಧಿನಿಯಮಗಳು ತಾರತಮ್ಯಕಾರಕವಾಗಿವೆ ಎಂಬ ನನ್ನ ಅಭಿಪ್ರಾಯವನ್ನು ಸದನವು ಸಮ್ಮತಿಸುತ್ತದೆ. ಕೆಲವು ಪ್ರದೇಶದಲ್ಲಿ ಶಾಶ್ವತವಾದ ಮೀಸಲಾತಿಯು ಇರುತ್ತದೆ, ಇತರೆಡೆಯಲ್ಲಿ ಅದು ಹತ್ತು ವರ್ಷಗಳವರೆಗೆ ಇದೆ. ಒಂದು ಪ್ರದೇಶದಲ್ಲಿ ಮಹಿಳೆಯರು ಮೀಸಲಾತಿ ಪಡೆಯುತ್ತಿದ್ದರೆ ಇನ್ನೊಂದು ಪ್ರದೇಶದಲ್ಲಿ ಹಾಗೆಯೆ ಪಡೆಯುತ್ತಿಲ್ಲ.

**ಅಪರಾಹ್ನ 4.30**

ಹಾಗಾಗಿ, ಕನಿಷ್ಠಪಕ್ಷ ಈ ಗಳಿಗೆಯಲ್ಲಿ ಇದು ಸಂವಿಧಾನದ 14ನೇ ಅನುಚ್ಛೇದದ ವಿಚಾರ ಮತ್ತು ಉದ್ದೇಶವನ್ನು ಅಂದರೆ ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಸಮಾನರು ಎಂಬುದನ್ನು ಭಂಗಗೊಳಿಸುತ್ತದೆ. ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಕಾನೂನುಗಳು ಇರುವುದಾಗಿ ನೀವು ಹೇಳಬಹುದು. ಇಷ್ಟಾದರೂ ಒಂದು ರಾಜ್ಯದಲ್ಲಿ ಜನರ ಜನರ ನಡುವೆ ತಾರತಮ್ಯದ ವರ್ತನೆ ಇರಲಿ ಇಲ್ಲದಿರಲಿ ಆ ಅನುಚ್ಛೇದದ ಭಾವನೆಯಿಂದ ನೀವು ಹೊರಬರಲು ಸಾಧ್ಯವಿಲ್ಲ.

ಈ ಎಲ್ಲ ಅಭಿಪ್ರಾಯಗಳಿಂದ, ನಾನು ಈ ವಿಧೇಯಕವನ್ನು ವಿರೋಧಿಸುತ್ತೇನೆ ಮತ್ತು ಈ ವಿಧೇಯಕವನ್ನು ಅಂಗೀಕರಿಸಕೂಡದೆಂದು ಹೇಳುತ್ತೇನೆ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ (ಗುಬ್ಬಿ):-** ಸ್ವಾಮಿ, ಮೊದಲನೆಯ ಬಾರಿ ಬಂದ ಪಾಯಿಂಟ್ ಆಫ್ ಆರ್ಡರಿನ ಅವಾಂತರದಲ್ಲಿ, ಅದು ಸರಿಯೇ ತಪ್ಪೇ ಎನ್ನುವ ವಿಚಾರದಲ್ಲಿ ರೂಲಿಂಗ್ ಕೊಡುತ್ತ, ಈ ಬಿಲ್ ಸರಿಯಾಗಿದೆ. ಚರ್ಚೆಯಾಗಬಹುದು ಎಂದು ತಿಳಿಸಿದಿರಿ. ಈ ಬಿಲ್ಲನ್ನು ತರಬೇಕಾದ ಮಂತ್ರಿಗಳು ಇವೊತ್ತು ಸಭೆಯಲ್ಲಿಲ್ಲ. ಅವರು ಪ್ರವಾಸದಲ್ಲಿದ್ದು 29ನೆಯ ತಾರೀಖು ಹೊತ್ತ ಸಂಯುಕ್ತ ಜವಾಬ್ದಾರಿಯನ್ನು ಹೊತ್ತ ಜತ್ತಿ ಮಂತ್ರಿ ಮಂಡಲಕ್ಕೆ ಈ ಮುಖೇನ ತಿಳಿಸದೆ ಇದ್ದರೆ ವಿಧಿಯಿಲ್ಲ ರಾಜ್ಯಾಂಗದಲ್ಲಿ ಆರ್ಟಿಕಲ್ 334ರ ಪ್ರಕಾರ ಹರಿಜನ-ಗಿರಿಜನರಿಗೆ ಹತ್ತು ವರ್ಷಕಾಲ ರಕ್ಷಣೆ ಕೊಡುತ್ತದೆ ನನ್ನ ಕಮ್ಯುನಿಸ್ಟ್ ಸ್ನೇಹಿತರು ಹತ್ತು ವರ್ಷ ಏಕೆ ರಕ್ಷಣೆ ಕೊಡುತ್ತೀರಿ, ಜೀವಾವಧಿ ಇರಲಿ, ಎಲ್ಲಿಯವರೆಗೆ ಮೈಸೂರು ಸಂಸ್ಥಾನ ಇರುತ್ತದೆಯೋ ಅಲ್ಲಿಯವರೆಗೂ ಹರಿಜನರಿಗೆ ಸ್ಥಳೀಯ ಸಂಸ್ಥೆಗಳಲ್ಲಿ ರಿಜರ್ವೇಷನ್ ಇಡಿ ಎಂದು ಹೇಳಿದರು. ಆದರೆ 334 ಆರ್ಟಿಕಲ್ ಪ್ರಕಾರ ಏಕೆ ರಕ್ಷಣೆ

ತೆಗೆದುಕೊಳ್ಳುತ್ತಿದ್ದರೋ ತಿಳಿಯುವುದಿಲ್ಲ. ಪ್ರಶ್ನೆಯನ್ನು ಕೇಳಿದರೆ ನಮ್ಮ ಸ್ಥಳೀಯ ಶಾಖೆಯ ಮಂತ್ರಿಗಳು ಅದು ಹಾಗಲ್ಲ, ಇದು ಹೀಗಲ್ಲ, ಎಂದು ಹೇಳುತ್ತಾರೆ. ಅವರು ಈಗ ಇದ್ದು ಎಲ್ಲವನ್ನೂ ವಿವರಿಸಬೇಕಾಗಿತ್ತು. ಎಷ್ಟೋ ನೀತಿ, ನಿಯಮಗಳನ್ನು ಹೇಳುವವರು ಈ ದಿನ ಸಭೆಯಲ್ಲಿಲ್ಲದೆ ಇರುವುದು ತಪ್ಪಲ್ಲವೇ ಎಂದು ಕೇಳುತ್ತೇನೆ. ಭಾರತದ ಪ್ರಧಾನ ಮಂತ್ರಿಗಳು ಇಂಗ್ಲೆಂಡಿಗೆ ಕಾಮನ್‌ವೆಲ್ತ್ ಸಭೆಗೆ ಹೋಗಿದ್ದಾಗ, ಮೊರಾರ್ಜಿ ದೇಸಾಯಿಯವರಿಗೆ ನನ್ನ ಗೈರು ಹಾಜರಿಯಲ್ಲಿ ನನ್ನ ಅಧಿಕಾರವನ್ನು ನಿರ್ವಾಹ ಮಾಡು ಎಂದು ಅಧಿಕಾರವನ್ನು ಕೊಟ್ಟು ಹೋಗಿದ್ದರು. ನಮ್ಮ ಮಾನ್ಯ ಮಂತ್ರಿಗಳು ಕಾಂಗೋ ಪ್ರಶ್ನೆಯನ್ನು ತುರುವೇಕೆರೆಯಲ್ಲಿ ಗಿಡದ ಕೆಳಗೆ ಕುಳಿತುಕೊಂಡು ಚರ್ಚೆ ಮಾಡುವುದಕ್ಕೆ ಹೋಗಿದ್ದಾರೆಯೇ ಎಂದು ಕೇಳುತ್ತೇನೆ.

**Statement of objects and reason ನಲ್ಲಿ (ಉದ್ದೇಶಗಳು ಮತ್ತು ಕಾರಣಗಳ ವಿವರಣೆಯಲ್ಲಿ)** ತಾವು ಹೀಗೆ ಹೇಳಿದ್ದೀರಿ:-

**"ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮಹಿಳೆಯರಿಗೆ ಮೀಸಲಾತಿ ಸ್ಥಾನಗಳನ್ನು ಕಲ್ಪಿಸಿ ಮುಂಬಯಿ ಭಾಗದ ಕೆಲವು ಮುನಿಸಿಪಾಲಿಟಿಗಳಿಗೆ 1960ರ ಜನವರಿ 26ರ ನಂತರ ಚುನಾವಣೆಗಳು ಆಗಲೇ ನಡೆದಿರುವುದರಿಂದ, ಆ ಚುನಾವಣೆಗಳಿಗೆ ಮಾನ್ಯತೆ ನೀಡುವುದು ಅಗತ್ಯವಾಗಿದೆ. ಈ ಉದ್ದೇಶಕ್ಕಾಗಿ ವಿಧೇಯಕದ 6ನೇ ಖಂಡದಲ್ಲಿ ಉಪಬಂಧವನ್ನು ಮಾಡಲಾಗಿದೆ".**

ಇದರಿಂದ ಮತ್ತೊಂದು ತೇಪೆಯನ್ನು ಸರಿಮಾಡಿಕೊಳ್ಳುವುದು ಸರಿಯೇ, ನ್ಯಾಯವೇ ಎಂದು ಕೇಳುತ್ತೇನೆ. 1960ನೆಯ ಇಸವಿಯಲ್ಲಿ ಜನವರಿ, ಫೆಬ್ರುವರಿ ತಿಂಗಳಿನಲ್ಲಿ ಈ ಸಭೆಯ ಅಧಿವೇಶನಗಳು ನಡೆಯುತ್ತಿರಲಿಲ್ಲವೇ? ರಾಜ್ಯಂಗದ 334ನೇ ವಿಧಿಗೆ ಪಾರ್ಲಿಮೆಂಟಿನಲ್ಲಿ ತಿದ್ದುಪಡಿಯನ್ನು ತಂದ ಮೇಲೆ ಅದನ್ನು ಏಕೆ ಕಾಪಿ ಮಾಡುತ್ತೀರೋ ಗೊತ್ತಾಗುವುದಿಲ್ಲ. 334ನೇ ವಿಧಿ ಖಣಚಣಜ ಐಜಿರುಟಚಣಡಿಢ ಚಿಟಿಜ ಕಚಿಡಿಟುಚಿಟಜಟಿ (ರಾಜ್ಯ ವಿಧಾನ ಮಂಡಲಗಳು ಮತ್ತು ಸಂಸತ್ತು) ಇದಕ್ಕೆ ಮಾತ್ರ ಅನ್ವಯಿಸುತ್ತದೆ. ಗ್ರಾಮ ಪಂಚಾಯಿತಿಗಳಿಗೆ, ಮುನಿಸಿಪಾಲಿಟಿಗಳಿಗೆ, ಕಾರ್ಪೋರೇಷನ್ನಿಗೆ ರಿಜರ್ವೇಷನ್ ಇರಬೇಕು ಎಂಬುದನ್ನು ರಾಜ್ಯಾಂಗದಲ್ಲಿ ಎಲ್ಲಿ ಹೇಳಿದೆ? ನೀವೇನಾದರೂ ಬುದ್ಧಿವಂತರೆನಿಸಿಕೊಳ್ಳಬೇಕಾಗಿದ್ದರೆ ನೀವು ದಕ್ಷತೆಯಿಂದ ವ್ಯವಹಾರ ಮಾಡುವವರೆಂದು ಹೇಳಿಸಿಕೊಳ್ಳಬೇಕಾಗಿದ್ದರೆ, ಇಂಥ ಸಣ್ಣಮಟ್ಟ ವಿಚಾರಗಳನ್ನು ಇಷ್ಟು ಸುಲಭವಾಗಿ ತಡಹಾಯುಹೋಗತಕ್ಕ ರೀತಿ ನಿಲ್ಲಲೇಬೇಕು. ನಿಮ್ಮ ಸರ್ಕಾರ ತಪ್ಪು ಹೆಜ್ಜೆ ಇಡಬಾರದು, ಹಣಕಾಸಿನ ಸಚಿವರು ನೀತಿ,ನಿಯಮಗಳನ್ನು ಹಾಕಿಕೊಂಡು ಹೋದರೆ

ಮುಂದಿನ ವೇಳೆಗೆ ಅದನ್ನು ಅನುಸರಿಸುತ್ತೇವೆ ಎಂದು ಬೋಧೆ ಮಾಡಿದರು. ಅವರು ಬೋಧಕರಾಗಿ ಇರುವುದಕ್ಕಿಂತಲೂ ಕಾರ್ಯದಲ್ಲಿ ಆಚರಣೆ ಮಾಡುವುದನ್ನು ಅರಿತುಕೊಂಡು ಕಾರ್ಯಾಚರಣೆ ಮಾಡುವುದನ್ನು ಜತ್ತಿ ಮಂತ್ರಿಮಂಡಲ ಅರಿಯಬೇಕು.

ಶ್ರೀಮಾನ್ ನರಸಿಂಹನ್ ಅವರನ್ನು ಮದುವೆ ಮಾಡಿಕೊಳ್ಳಿ ಎಂದು ಕೇಳುತ್ತಿದ್ದೇನೆ. ಕೊನೆಯಪಕ್ಷ 1962ರ ಚುನಾವಣೆಗಳೂ ನಡೆಯುವದರೊಳಗಾಗಿ ಮದುವೆ ಮಾಡಿಕೊಂಡರೆ ಗಂಡ–ಹೆಂಡತಿ ಇಬ್ಬರ ವೋಟಿನ ಹಕ್ಕು ಇರುತ್ತದೆ. ಅವರು ವಿರೋಧ ಮಾಡುತ್ತಿದ್ದಾರೆ. ಆದರೆ ಇದಕ್ಕೆ ಶ್ರೀಮಾನ್ ಜತ್ತಿಯವರು ಸಹಾಯ ಮಾಡಬೇಕು. ಏಕೆಂದರೆ ಕೋಲಾರದ ಚಿನ್ನದ ಗಣಿಯಲ್ಲಿ ಏನೂ ವ್ಯಾಜ್ಯವಿಲ್ಲದೆ ಶಾಂತಿಯುತವಾಗಿ ವ್ಯವಹಾರವನ್ನು ನಡೆಸುತ್ತೇವೆಂದು ಮುಖ್ಯ ಮಂತ್ರಿಯವರು ಆಶ್ವಾಸನೆ ಕೊಟ್ಟರೆ...

**ಶ್ರೀ ಹೆಚ್.ಎಂ. ಚನ್ನಬಸಪ್ಪ**:– ಇದನ್ನು ವಿಧೇಯಕದ ಮೇಲಿನ ಚರ್ಚೆ ಎಂದು ನಾನು ತೆಗೆದುಕೊಳ್ಳಬಹುದೇ?

**ಶ್ರೀ ಸಿ.ಜೆ. ಮುಕ್ಕಣಪ್ಪ**:– ಶ್ರೀಮಾನ್ಯ ಚನ್ನಬಸಪ್ಪನವರು ಎಷ್ಟರಮಟ್ಟಿಗೆ ಡಿಜಟಜಟಿಣ (ಕಠಿಣ) ಆಗಿ ಮಾತನಾಡುತ್ತಾರೆಯೋ ವಿಷಯಕ್ಕೆ ತಕ್ಕಂತೆ ಮಾತನಾಡುತ್ತಾರೆಯೋ ಹಾಗೆಯೇ ನಾವು ಮಾತನಾಡುತ್ತೇವೆ. ದೇವರು ನಮಗೂ ಬುದ್ಧಿ ಕೊಟ್ಟಿದ್ದಾನೆ. ಬೊಂಬಾಯಿ ಕರ್ನಾಟಕದ ಭಾಗದಲ್ಲಿ ಹೆಣ್ಣು ಮಕ್ಕಳಿಗೆ ರಿಜರ್ವೇಷನ್ ಇದೆ. ಅವರ ವಿಷಯದಲ್ಲಿ ಎಷ್ಟು ಸಹೃದಯರಾಗಿದ್ದಾರೆಯೋ ಅದೇ ರೀತಿ ಮಿಕ್ಕ ಭಾಗಗಳಿಂದ ಬರತಕ್ಕ ಹೆಣ್ಣುಗಳು ಮಕ್ಕಳಿಗೂ ಏಕೆ ಅಂಥ ಸದ್ಭಾವನೆಯನ್ನು ಸಲ್ಲಿಸಲಿಲ್ಲವೆಂದು ಕೇಳಬೇಕಾಗಿದೆ, ಈ ಸಭೆಯಲ್ಲಿ ಶ್ರೀಮತಿ ನಾಗರತ್ನಮ್ಮನವರಿದ್ದಾರೆ. ಶ್ರೀಮತಿ ಬಸವರಾಜೇಶ್ವರಿಯುವರಿದ್ದಾರೆ, ಶ್ರೀಮತಿ ಸುಶೀಲಬಾಯಿ ಸಹ ಇದ್ದಾರೆ. ಬಿಜಾಪುರ ಮುನಿಸಿಪಾಲಿಟಿಯಲ್ಲಿ ಹೆಣ್ಣು ಮಕ್ಕಳಿಗೆ ರಿಜರ್ವೇಷನ್ ಇರುವುದರಿಂದ ಅವರ ಅಭಿವೃದ್ಧಿಯಾಗುವುದಕ್ಕೆ ಅವಕಾಶವಿದೆ. ಹೈದರಾಬಾದಿನಲ್ಲಿ ತಾಯಿ ಬಸವರಾಜೇಶ್ವರಿ ಯವರು ಮೆಂಬರಾಗುವುದಕ್ಕೆ ಒಂದು amending bill (ತಿದ್ದುಪಡಿ ವಿಧೇಯಕವನ್ನು) ಶ್ರೀ ಜತ್ತಿಯವರಾಗಲೀ, ಸ್ಥಳೀಯ ಸಂಸ್ಥೆಗಳ ಮಂತ್ರಿಗಳಾದ ಶ್ರೀ ಸುಬ್ರಹ್ಮಣ್ಯರವರಾಗಲೀ ಏಕೆ ತರಲಿಲ್ಲವೆಂದು ಕೇಳುತ್ತಿದ್ದೇನೆ. You are making discrimination between women folk of Mysore, women folk of Bombay, women folk of Madras, women folk of Hyderabad. Is it fair Sir? (ನೀವು, ಮೈಸೂರಿನ ಹೆಣ್ಣು ಮಕ್ಕಳು, ಬೊಂಬಾಯಿ ಹೆಣ್ಣು ಮಕ್ಕಳು, ಮದ್ರಾಸು ಹೆಣ್ಣು ಮಕ್ಕಳು, ಹೈದ್ರಾಬಾದ್ ಹೆಣ್ಣು ಮಕ್ಕಳ ನಡುವೆ ತಾರತಮ್ಯ ಮಾಡುತ್ತಿದ್ದೀರಿ. ಇದು ಸರಿಯೇ ಸರ್?) ಕಿತ್ತೂರ ಚೆನ್ನಮ್ಮನ ನಾಟಕ ನೋಡಿದ್ದೀರಿ, ಝಾನ್ಸಿ ಲಕ್ಷ್ಮಿಬಾಯಿಯ ಕಥೆ ಕೇಳಿದ್ದೀರಿ, ಹೆಣ್ಣು ಮಕ್ಕಳ ಮಾನ, ಮರ್ಯಾದೆ, ಅವರ ಸ್ಥಾನಮಾನಗಳ ರಕ್ಷಣೆ ನಮ್ಮ ಹೆಗಲ ಮೇಲೆ ಇಲ್ಲವೇ?

**ಶ್ರೀಮತಿ ಬಸವರಾಜೇಶ್ವರಿ**:– ರಕ್ಷಣೆ ಮಾಡಿಕೊಳ್ಳುವುದಕ್ಕೆ ಶಕ್ತಿಯನ್ನು ದೇವರು ನಮಗೆ ಕೊಟ್ಟಿದ್ದಾನೆ. ನಿಮ್ಮ ಕೈಯಲ್ಲಿ ಹೇಳಿಸಿಕೊಂಡು ರಕ್ಷಣೆ ಮಾಡಿಸಿಕೊಳ್ಳಬೇಕಾಗಿಲ್ಲ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ**:– ಶ್ರೀಮತಿ ಬಸವರಾಜೇಶ್ವರಿಯುವರಂತಹವರು, ಝಾನ್ಸಿ ರಾಣಿಯನ್ನಾಗಲಿ, ಕಿತ್ತೂರು ಚನ್ನಮ್ಮನವರಂತಹ ಶ್ರೀಮತಿ ಸುಶೀಲಾಬಾಯಿ ರಗಟೆಯವರಿಗಾಗಲಿ ನಾನು ಹೇಳಲಿಲ್ಲ. ಅವರ ವಿಚಾರವಾಗಿ ನಾನಿಲ್ಲಿ ಹೇಳುತ್ತಿಲ್ಲ. ದೇಶದಲ್ಲಿರತಕ್ಕ ಎಲ್ಲ ಹೆಣ್ಣು ಮಕ್ಕಳ

ಸ್ಥಾನಮಾನವೇನು, ಇದನ್ನು ರಕ್ಷಣೆ ಮಂತ್ರಿಮಂಡಲವನ್ನು ವಿಸ್ತೀರ್ಣ ಮಾಡುವುದು Efficiency improve (ದಕ್ಷತೆ ಸುಧಾರಣೆ) ಮಾಡುವುದಕ್ಕೋಸ್ಕರ ಎಂದು ಹೇಳಿದ್ದೀರಿ. Indirectly you have admitted Sir, in-efficiency was prevailing amongst the previous sixteen Ministers." (ಹಿಂದಿನ ಹದಿನಾರು ಸಚಿವರಲ್ಲಿ ಅದಕ್ಷತೆಯಿತ್ತು ಎನ್ನುವುದನ್ನು ತಾವು ಪರೋಕ್ಷವಾಗಿ ಒಪ್ಪಿಕೊಂಡಂತಾಯಿತು ಸ್ವಾಮಿ".) ಈಗಾಗಲೇ ಇದ್ದ 16 ಚಕ್ರಗಳು ಮತ್ತು ನಾಲ್ಕು ಹೊಸ ಚಕ್ರಗಳು ಸೇರಿಕೊಂಡು ಇವರು ಯಾವ ರಸ್ತೆಯಲ್ಲಿ ಹೋಗುತ್ತಿದ್ದಾರೋ ಮತ್ತು ರಥವನ್ನು ಹೊಡೆಯುವಂತಹ ವಾಮನ ಮೂರ್ತಿಗಳು ಏನು ಮಾಡುತ್ತಿದ್ದಾರೋ ಏನೋ ಒಂದು ಅರ್ಥವಾಗುತ್ತಿಲ್ಲ. (ನಗು) ಕಾನೂನಿಗೆ ಅಧ್ವಾನ ಮಾಡುವಂತಹ ಕೆಲಸಕ್ಕೆ ಸರ್ಕಾರ ಕೈ ಹಾಕಬಾರದು. ರಾಜ್ಯಾಂಗಕ್ಕನುಗುಣವಾಗಿಲ್ಲದೇ ಇರುವಂತಹ ತಿದ್ದುಪಡಿಯನ್ನು ಇಲ್ಲಿ ತಂದರೆ ಹೇಗೆ? ಇಲ್ಲಿಯವರೆಗೆ ತಾವು ದೇಶಲ್ಲಿರುವ ಜನರ ಹಿತಸಂರಕ್ಷಣೆ ಮಾಡಬೇಕೆಂದು ಹೇಳುತ್ತ ಬರೀ ಹರಿಜನರಿಗಾಗಿ, ಅವರನ್ನು ನಿಮ್ಮ ಕಡೆಗೆ ಇಟ್ಟುಕೊಳ್ಳಬೇಕು ಎಂದು ತಂದಿರುವ ಈ ತಿದ್ದುಪಡಿಗೆ ನಾವು ಒಪ್ಪಿಗೆ ಕೊಡುವುದಕ್ಕೆ ಆಗುವುದಿಲ್ಲ. ಶ್ರೀಮಾನ್ ಜತ್ತಿಯವರು ಈ ಸಭೆಯಲ್ಲಿ ರಾಜ್ಯದಲ್ಲಿರುವ ಎಲ್ಲ ಸ್ಥಳೀಯ ಸಂಸ್ಥೆಗಳಲ್ಲಿ ಹೆಣ್ಣು ಮಕ್ಕಳಿಗಾಗಿ ರಿಜರ್ವೇಷನ್ನನ್ನು ಮಾಡಲು ಮುಂದೆ ಅಮೆಂಡ್‌ಮೆಂಟು ತರುತ್ತೇವೆಂದು ಆಶ್ವಾಸನೆ ಕೊಟ್ಟರೆ ಈ ತಿದ್ದುಪಡಿಗೆ ನಾವು ಒಪ್ಪಿಗೆ ಕೊಡಬಹುದು, ಇಲ್ಲದೇ ಇದ್ದರೆ ಈ ತಿದ್ದುಪಡಿಯನ್ನು ಒಪ್ಪಿಕೊಳ್ಳುವುದಕ್ಕೆ ಆಗುವುದಿಲ್ಲ.

## ಜಾತಿ ವ್ಯಾಧಿ ನಿರ್ಮೂಲನೆಯಿಂದಲೇ ನಿಜವಾದ ಪ್ರಜಾಸತ್ತಾತ್ಮಕತೆ

**ಶ್ರೀ ಬಿ. ಶ್ಯಾಮಸುಂದರ್ (ಭಾಲ್ಕಿ):**– ತಾತ್ವಿಕವಾಗಿ ಈ ವಿಧೇಯಕವನ್ನು ನಾನು ವಿರೋಧಿಸುತ್ತೇನೆ. ಈ ಮೀಸಲಾತಿಯಿಂದ ರಾಷ್ಟ್ರದಲ್ಲಿ ಏನಾಗುತ್ತಿದೆ ಎಂದರೆ, ಪರಿಶಿಷ್ಟ ಜಾತಿಗಳ ಜನರು ಅವರೆಲ್ಲೇ ಇರಲಿ ಅವರನ್ನು ಅಸ್ಪೃಶ್ಯರೆಂದು ಕಾಣಲಾಗುತ್ತಿದೆ. ಹಾಗಿದ್ದಾಗ, ಈ ಮೀಸಲಾತಿಯಾದರೂ ಏಕೆ? ಸಂವಿಧಾನದ ಅಡಿಯಲ್ಲಿ ಸಾಮಾನ್ಯ ಮತಕ್ಷೇತ್ರಗಳಿಂದಲೂ ಸಹ ನಾವು ಸ್ಪರ್ಧಿಸಬಹುದು ಎನ್ನುವುದರಲ್ಲಿ ಯಾವುದೇ ಸಂದೇಹವಿಲ್ಲ. ಆದರೆ, ಸಾಮಾನ್ಯ ಮತಕ್ಷೇತ್ರದಿಂದ ಸ್ಪರ್ಧಿಸಲು ಹೋದರೆ, 'ನಿಮಗೇ ಪ್ರತ್ಯೇಕವಾದ ಮತಕ್ಷೇತ್ರವಿದೆ ಅಲ್ಲಿಗೆ ಹೋಗಿ ಸ್ಪರ್ಧಿಸಿ ಎಂದು ಬುದ್ಧಿ ಹೇಳುತ್ತಾರೆ. ಎಂಥ ಅಸಹ್ಯಕರವಾದ ಸ್ಥಿತಿ ಇದು. ನಾವು ಇದನ್ನು ಸಹಿಸಿಕೊಳ್ಳಲು ಸಾಧ್ಯವಿಲ್ಲ. ಸಂವಿಧಾನದ (8ನೇ ತಿದ್ದುಪಡಿ) ವಿಧೇಯಕ 1959ಅನ್ನು ಇಲ್ಲಿ ಮಂಡಿಸಿದ್ದಾಗ, ಇದೇ ತತ್ವದ ಮೇಲೆ ನಾನು ಅದನ್ನು ವಿರೋಧಿಸಿದ್ದೆ. ಈಗಲೂ ಸಹ ಈ ತಾರತಮ್ಯ ಹೋಗಬೇಕೆಂದು ನಾನು ಭಾವಿಸುತ್ತೇನೆ. ಇಲ್ಲಿ ಅಷ್ಟೇ ಅಲ್ಲ ಜೀವನದ ಎಲ್ಲ ಸ್ತರಗಳಲ್ಲಿ ಮೀಸಲಾತಿ ಸ್ಥಾನಗಳು ಇರಬಾರದು. ಆಗ ಮಾತ್ರವೇ ಈ ರಾಜ್ಯದ ಜನತೆ ಒಟ್ಟಾಗಿರಲು ಸಾಧ್ಯ. ನೀವೀಗ ಅಳವಡಿಸಿಕೊಂಡಿರುವ ಈ ಕ್ರಮಗಳು ರಾಷ್ಟ್ರದ ಜನತೆಯನ್ನು ಎರಡು–ಮೂರು ಪಕ್ಷಗಳನ್ನಾಗಿ ವಿಭಾಗಿಸಿದೆ; ಅವರನ್ನು ವರ್ಗ ಮತ್ತು ಉಪವರ್ಗಗಳನ್ನಾಗಿ ವಿಭಜಿಸದೆ, ನಾವು ಈಗಾಗಲೇ ಅನೇಕ ಜಾತಿ ವ್ಯಾಧಿಗಳು, ಸ್ಪೃಶ್ಯರು, ಮತ್ತು ಅಸ್ಪೃಶ್ಯರು, ವರ್ಗಗಳಲ್ಲಿ ವರ್ಗಗಳು ಇತ್ಯಾದಿಗಳಿಂದ ನರಳುತ್ತಿದ್ದೇವೆ. ಇವುಗಳನ್ನು ನಿರ್ಮೂಲ ಮಾಡದ ಹೊರತು, ನಮ್ಮ ರಾಷ್ಟ್ರದ ಜನತೆಯನ್ನು ಒಂದುಗೂಡಿಸಲು ಸಾಧ್ಯವಿಲ್ಲವೆಂದು ನನಗನಿಸುತ್ತದೆ. ಈ ಮೀಸಲಾತಿಗಳನ್ನು ತೆಗೆದುಹಾಕಿದ ನಂತರವೇ, ಪ್ರತಿಯೊಂದೂ ಸ್ತರದ ಬಡಜನತೆ, ಅವರು ಹಿಂದೂಗಳೇ ಆಗಿರಲಿ, ಕ್ರಿಶ್ಚಿಯನ್ನರೇ ಆಗಿರಲಿ ಅಥವಾ ಮುಸಲ್ಮಾನರೇ ಆಗಿರಲಿ, ಅವರೆಲ್ಲರೂ ಒಟ್ಟಾಗುತ್ತಾರೆ ಮತ್ತು ಈ ರಾಷ್ಟ್ರದ ಹಿತಕ್ಕಾಗಿ ಹೋರಾಡುತ್ತಾರೆಂಬುದು ನಮಗೆ ತಿಳಿಯುತ್ತದೆ. ಆಗ, ರಾಷ್ಟ್ರದಲ್ಲಿ ಒಂದು ನಿಜವಾದ ಪ್ರಜಾಸತ್ತಾತ್ಮಕ ಸರ್ಕಾರವನ್ನು ಸ್ಥಾಪಿಸುವುದರ ಮೂಲಕ ರಾಷ್ಟ್ರದ ಎಲ್ಲ ಶಕ್ತಿಗಳನ್ನು ಅವರು ಒಂದುಗೂಡಿಸುತ್ತಾರೆ. ಅಲ್ಲಿಯವರೆಗೂ, ಈಗ ನಡೆಯುತ್ತಿರುವಂತೆ ಹಿತಾಸಕ್ತ ರಾಜಕೀಯ ಪಕ್ಷಗಳಿಂದ ಬಡ ಜನತೆ ಶೋಷಣೆಗೆ ಒಳಗಾಗುತ್ತಲೇ ಇರುತ್ತಾರೆ. ಚುನಾವಣೆ ಸಮಯ ಬಂದಾಗ ಒಬ್ಬರು ಮತ್ತೊಬ್ಬರನ್ನು ದೂಷಿಸುತ್ತಾ ಆ ಪಕ್ಷ ಅಥವಾ ಈ ಪಕ್ಷಗಳೊಂದಿಗೆ ತಮ್ಮನ್ನು ಗುರುತಿಸಿಕೊಳ್ಳುತ್ತಾರೆ. ಇವುಗಳನ್ನು ನಿರ್ಮೂಲ ಮಾಡಿದಾಗಲೇ, ಅದು ನಿಜವಾದ ಪ್ರಜಾಸತ್ತಾತ್ಮಕ ದಿನ ಮತ್ತು ಆ ದಿನದಿಂದಲೇ ನಾವು ಹಾಕಿಕೊಂಡ ಗುರಿ, ಅಂದರೆ ನಾವು ಹೋರಾಟ ಮಾಡುತ್ತಿರುವ ಸಮಾಜವಾದೀ ಸಮಾಜವನ್ನು ತಲುಪಲು ನಮ್ಮ ಹೆಜ್ಜೆಯನ್ನು ಪ್ರಾರಂಭಿಸುತ್ತೇವೆ. ಇದುವರೆಗೂ, ನಾವು ನಿಜವಾದ ಅರ್ಥದಲ್ಲಿ ಸ್ವತಂತ್ರರಾಗಿಲ್ಲ ಅಥವಾ ನಮ್ಮ ಇಚ್ಛೆಯಂತೆ ಯೋಚಿಸುವುದಕ್ಕಾಗಲಿ ನಮ್ಮಿಷ್ಟದಂತೆ ನಡೆಯುವುದಕ್ಕಾಗಲಿ ಅಥವಾ ನಮ್ಮಿಷ್ಟದಿಂದ ಸ್ಪರ್ಧಿಸುವುದಕ್ಕಾಗಲಿ ನಮಗೆ ಸ್ವಾತಂತ್ರ್ಯವಿಲ್ಲ.

**ಶ್ರೀ ಆರ್. ಚೆನ್ನಿಗರಾಮಯ್ಯ:**– ಮಾನ್ಯರೇ, ಈ ವಿಧೇಯಕಕ್ಕೆ ನಾನು ಬೆಂಬಲ ನೀಡುತ್ತೇನೆ. ನನ್ನ ಸ್ನೇಹಿತರಾದ ಶ್ರೀ ಶ್ಯಾಮಸುಂದರ್‌ರವರು ಮೀಸಲಾತಿ ತಕ್ಷಣವೇ ನಿಲ್ಲಬೇಕು ಮತ್ತು ಅದನ್ನು ಯಾವುದೇ ಕಾರಣಕ್ಕೆ ಮುಂದುವರಿಸಬಾರದೆಂದು ವ್ಯಕ್ತಪಡಿಸಿದ ಅವರ ಭಾವನೆಯನ್ನು ನಾನು ಮೆಚ್ಚುತ್ತೇನೆ. ಭಾವನೆಯನ್ನು ಬಿಟ್ಟರೆ, ನಾವು ಈ ಭೌತಿಕ ಜಗತ್ತಿನಲ್ಲಿ ವಾಸಿಸುತ್ತಿದ್ದೇವೆ. ಈ ಎಲ್ಲಾ ವರ್ಷಗಳಲ್ಲಿ ಸ್ಥಳೀಯ ಸಂಸ್ಥೆಗಳು ಮತ್ತು ವಿಧಾನ ಮಂಡಲಗಳ ಚುನಾವಣೆಗಳಲ್ಲಿ ನಾವು ಪಡೆದ ಅನುಭವವನ್ನು ಪರಿಗಣನೆಗೆ ತೆಗೆದುಕೊಳ್ಳಬೇಕು. ಮೊದಲ ಎರಡು ಸಾರ್ವತ್ರಿಕ ಮಹಾ ಚುನಾವಣೆಗಳ ನಂತರ, ಪರಿಶಿಷ್ಟ ಜಾತಿಗಳಿಗೆ ಸೇರಿರುವಂಥ, ಇಲ್ಲಿರುವ ಸದಸ್ಯರು ವಿಧಾನ ಮಂಡಲಗಳಿಗೆ ನಡೆದ ಚುನಾವಣೆಗಳಲ್ಲಿ ಹಾಗೂ ಸ್ಥಳೀಯ ಸಂಸ್ಥೆಗಳಿಗೆ ನಡೆದ ಚುನಾವಣೆಗಳಲ್ಲಿ ಈಗಾಗಲೇ ಕಹಿ ಅನುಭವಿಸಿದ್ದಾರೆ. ಆದ್ದರಿಂದ, ಅವರ ಭಾವನೆಗಳನ್ನು ಪ್ರಶಂಸಿಸುತ್ತಾ ಹೇಳುವುದೇನೆಂದರೆ, ಒಂದು ವೇಳೆ ಮೀಸಲಾತಿಯನ್ನು ಈ ದಿನವೇ ತೆಗೆದುಹಾಕಿದಲ್ಲಿ, ನನ್ನ ಸ್ನೇಹಿತರ ಅಂತರಂಗಕ್ಕೂ ಗೊತ್ತಿದೆ. ಪರಿಶಿಷ್ಟ ಜಾತಿಗಳಿಗೆ ಸೇರಿದ ಪ್ರಸ್ತುತ ಸಂಖ್ಯೆಯ 1/4ರಷ್ಟು ಸದಸ್ಯರೂ ವಿಧಾನ ಮಂಡಲದ ಸಾರ್ವತ್ರಿಕ ಚುನಾವಣೆಗಳಲ್ಲಿ ಅಥವಾ ಸ್ಥಳೀಯ ಸಂಸ್ಥೆಗಳಲ್ಲಿ ಚುನಾಯಿತರಾಗುವುದಿಲ್ಲವೆಂಬುದು. ಮೀಸಲಾತಿಯಿಲ್ಲದೆ ಸಾರ್ವತ್ರಿಕ ಚುನಾವಣೆಗಳನ್ನು ನಾವು ಎದುರಿಸಲು ಸಿದ್ಧ ಎನ್ನುವುದು ನಮಗೆ ಸರಿಯಾಗಿದೆ. ಎಲ್ಲೋ ಒಬ್ಬಿಬ್ಬರು ಮೀಸಲಾತಿ ಇಲ್ಲದೆ ಚುನಾಯಿತರಾಗಬಹುದು. ಆದರೆ, ಇತರ ಸದಸ್ಯರು ಚುನಾಯಿತರಾಗುವ ಬಗ್ಗೆ ನನಗೆ ಭರವಸೆಯಿಲ್ಲ. ಈ ಹಿಂದೆ, ತುಳಿತಕ್ಕೊಳಗಾದ ವರ್ಗಗಳೆಂದು ಕರೆಯಲಾಗುತ್ತಿದ್ದ ಪರಿಶಿಷ್ಟ ಜಾತಿಗಳ ಮೀಸಲಾತಿಯ ಪ್ರಶ್ನೆಯನ್ನು ಒಪ್ಪಿಕೊಂಡಾಗ ಸಂವಿಧಾನ ಸಭೆಯ ಸದಸ್ಯರಲ್ಲಿ ನಾನೂ ಒಬ್ಬನಾಗಿದ್ದೆ ಎಂದು ಇಲ್ಲಿ ಹೇಳಲು ಇಷ್ಟಪಡುತ್ತೇನೆ. ಆ ಸಮಯದಲ್ಲಿ, ಸಂವಿಧಾನ ಸಭೆಯ ಮಾನ್ಯ ಮುಸಲ್ಮಾನ್ ಸದಸ್ಯರು ತಮಗೆ ಮೀಸಲಾತಿ ಬೇಡವೆಂದು ಪ್ರಸ್ತಾಪಿಸಿದರು. ಮೂರು ಸದಸ್ಯರಲ್ಲಿ ಒಬ್ಬರು, ತಾವು ಮೀಸಲಾತಿ ಪರವಾಗಿಲ್ಲವೆಂದು ಪ್ರತಿಪಾದಿಸಿದರು. ಆದರೆ, ಅಂತಿಮವಾಗಿ 30 ಸದಸ್ಯರ ಮೀಸಲಾತಿಯನ್ನು ಒಪ್ಪಿಕೊಳ್ಳಲಾಯಿತು.

ಈಗ ವಿಧಾನ ಮಂಡಲಗಳಲ್ಲಾಗಲಿ, ಸ್ಥಳೀಯ ಸಂಸ್ಥೆಗಳಲ್ಲಾಗಲಿ ಸಂಸತ್ತಿನಲ್ಲಾಗಲಿ ಮುಸಲ್ಮಾನರಿಗಾಗಿ ಯಾವುದೇ ಮೀಸಲಾತಿ ಇಲ್ಲ. ಅವರ ಸ್ಥಿತಿ ಏನಾಗಿದೆ? ಸಾರ್ವಜನಿಕ ಚುನಾವಣೆಗಳಲ್ಲಿ ಮುಸಲ್ಮಾನ್ ಸಮುದಾಯಕ್ಕೆ ಸೇರಿದ ಎಷ್ಟು ಸದಸ್ಯರು ಚುನಾಯಿತರಾಗುತ್ತಾರೆ. ಪರಿಶಿಷ್ಟ ಜಾತಿಗಳಿಗಿಂತ ಮುಸಲ್ಮಾನರು ಆರ್ಥಿಕವಾಗಿ, ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಗಣನೀಯ ಸಂಖ್ಯೆಯಲ್ಲಿ ಹೆಚ್ಚು ಮುಂದುವರೆದಿದ್ದರೂ ಎಷ್ಟು ಜನ ಚುನಾಯಿತರಾಗಿದ್ದಾರೆ? ಈ ಭೌತಿಕ ಜಗತ್ತಿನಲ್ಲಿ ನಾವು ಜೀವನ ಮಾಡುತ್ತಿದ್ದೇವೆ. ಮೀಸಲಾತಿಯಿಲ್ಲದೆ ಸಾರ್ವಜನಿಕ ಚುನಾವಣೆಗಳಲ್ಲಿ ಪರಿಶಿಷ್ಟ ಜಾತಿಗಳು ಚುನಾಯಿತರಾಗುವುದು ಅತ್ಯಂತ ಕಠಿಣ. ಆಗಲೂ ಸಹ, ಪ್ರಸ್ತುತ ಸಂಖ್ಯೆ 1/4 ರಷ್ಟು ಚುನಾಯಿತರಾಗುವುದಿಲ್ಲ. ಸಂವಿಧಾನದ ಮೂಲಕ ಅಸ್ಪೃಶ್ಯತೆಯನ್ನು ನಿವಾರಣೆ ಮಾಡಿದ್ದರೂ ಕೂಡ ವಾಸ್ತವವಾಗಿ ಅದು ಇನ್ನೂ ಇದೆ.

**ಶ್ರೀ ಬಿ. ಶ್ಯಾಮಸುಂದರ್**:- ಅಂದರೆ, ಈ ರಾಷ್ಟ್ರದಲ್ಲಿರುವ ವಿವಿಧ ಸಮುದಾಯಗಳ ನಡುವೆ ಪ್ರೀತಿ-ವಾತ್ಸಲ್ಯಗಳನ್ನುಂಟು ಮಾಡುವಲ್ಲಿ ಅವರ ಪಕ್ಷ ವಿಫಲವಾಗಿದೆ ಎನ್ನುವುದನ್ನು ನನ್ನ ಸ್ನೇಹಿತರು ಒಪ್ಪಿಕೊಂಡಂತಾಯಿತು.

**ಶ್ರೀ ಆರ್. ಚೆನ್ನಿಗರಾಮಯ್ಯ**:- ನಾವು, ಬೇರೆ ಬೇರೆ ಪಕ್ಷಗಳಿಗೆ ಸೇರಿದ್ದರೂ, ನಾವೆಲ್ಲರೂ ಮನುಷ್ಯರೇ ಮತ್ತು ಮಾನವ ಸಹಜ ಗುಣ ಏನು ಇದೆಯೋ ಅದು ಹಾಗೆಯೇ ಇರುವುದರಿಂದ, ಸಂವಿಧಾನದ ಮೂಲಕ ಅಸ್ಪೃಶ್ಯತೆಯನ್ನು ನಿರ್ಮೂಲನೆ ಮಾಡಿದ್ದರೂ, ವಾಸ್ತವದಲ್ಲಿ ಅದು ಹಾಗೆಯೇ ಇದೆ. ಆದ್ದರಿಂದಲೇ, ವಿಧಾನ ಮಂಡಲ ಮತ್ತು ಸ್ಥಳೀಯ ಸಂಸ್ಥೆಗಳಿಂದ ಹರಿಜನರು ಮೀಸಲಾತಿ ಇಲ್ಲದೆ ಹೆಚ್ಚಿನ ಸಂಖ್ಯೆಯಲ್ಲಿ ಗೆದ್ದುಬರುವುದು ಕಠಿಣವಾಗಿದೆ ಎಂದು ನಾನು ಹೇಳುತ್ತೇನೆ. ನನ್ನ ಸ್ನೇಹಿತರಾದ ಶ್ರೀ ಮಲ್ಲಾರಾಧ್ಯರು ಮತ್ತು ಮುಕ್ಕಣ್ಣಪ್ಪನವರು ಈ ವಿಧೇಯಕವನ್ನು ವಿರೋಧಿಸುತ್ತಿರುವುದರಿಂದ ಅವರು ಹರಿಜನರನ್ನು ವಿರೋಧಿಸುತ್ತಾರೆಂದಲ್ಲ. ಸಂವಿಧಾನದ ಅನುಚ್ಛೇದ 334ರ ಆಧಾರದ ಮೇಲೆ ಈ ವಿಧೇಯಕವನ್ನು ತರಲಾಗಿದೆಯೆಂಬ ಕಾರಣದಿಂದ ಅವರು ಈ ವಿಧೇಯಕವನ್ನು ವಿರೋಧಿಸುತ್ತಾರೆ ಎನಿಸುತ್ತದೆ. ಸಂಸತ್ತಿನಲ್ಲಿ, ಅನುಚ್ಛೇದ 334ಕ್ಕೆ ತಿದ್ದುಪಡಿ ತರಲಾಗಿರುವುದರಿಂದ ಸ್ಥಳೀಯ ಸಂಸ್ಥೆಗಳಿಗೆ ಅದು ಅನ್ವಯವಾಗದೇಯಿರುವ ಕಾರಣ ಈ ವಿಧೇಯಕದ ಮೂಲಕ ಅವರು ತಂದಿದ್ದಾರೆ. ಅನುಚ್ಛೇದ 334 ಸ್ಥಳೀಯ ಸಂಸ್ಥೆಗಳಿಗೆ ಅನ್ವಯವಾಗುವುದಿಲ್ಲವೆಂಬುದನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಅನುಚ್ಛೇದ 334ರಲ್ಲಿ ನೀಡಲಾದ ನಿರ್ದೇಶನಕ್ಕೆ ಸಂಬಂಧಿಸಿದಂತೆ, ಒಂದು ವೇಳೆ ಅದು ಸ್ಥಳೀಯ ಸಂಸ್ಥೆಗಳಿಗೂ ಅನ್ವಯವಾಗುವಂತಿದ್ದಲ್ಲಿ, ಸರ್ಕಾರ ಈ ವಿಧೇಯಕವನ್ನು ತರುತ್ತಲೇ ಇರಲಿಲ್ಲ. ನೀವೆಲ್ಲಾ ದೊಡ್ಡ ಮನಸ್ಸು ಮಾಡಿ ಸ್ಥಳೀಯ ಸಂಸ್ಥೆಗಳಿಗೆ ಒಪ್ಪಿಗೆ ನೀಡಿದ್ದೀರಿ. ಅವರಿಗೆ ಹತ್ತು ವರ್ಷಗಳ ಕಾಲ ವಿಸ್ತರಣೆಯನ್ನು ನೀಡಿದ್ದೀರಿ; ಅವರಿಗೆ ಇನ್ನೂ 10 ವರ್ಷಗಳ ವಿಸ್ತರಣೆಯನ್ನು ನೀಡುವಂಥ ಅದೇ ಉದಾರತನವನ್ನು ತಾವು ತೋರುತ್ತಿಲ್ಲ.

**ಶ್ರೀ ಎಂ.ಸಿ. ನರಸಿಂಹನ್**:- ಕಾನೂನಿನಲ್ಲಿ ಅನುಚ್ಛೇದ 334ರ ಬಗ್ಗೆ ಉಲ್ಲೇಖನ ಮಾಡಲಾಗಿದೆ. ಹತ್ತು ವರ್ಷಗಳಿಗಷ್ಟೇ ಏಕೆ ಸೀಮಿತಗೊಳಿಸುತ್ತೀರಿ. ಹೈದ್ರಾಬಾದ್‌ಗೆ ಸಂಬಂಧಿಸಿದಂತೆ 10 ಅಥವಾ 20 ವರ್ಷಗಳಿಗೆ ಅದನ್ನು ಸೀಮಿತಗೊಳಿಸಿರುವುದಿಲ್ಲ.

**ಶ್ರೀ ಆರ್. ಚನ್ನಿಗರಾಮಯ್ಯ**:- ನಿಜವಾಗಿಯೂ ನಿಮಗಷ್ಟು ಕಾಳಜಿಯಿದ್ದರೆ, 20 ಅಥವಾ 40 ವರ್ಷಗಳಷ್ಟು ಕಾಲ ವಿಸ್ತರಿಸಲು ತಾವು ತಿದ್ದುಪಡಿಯನ್ನು ತನ್ನಿರಿ. ಅನುಚ್ಛೇದದ 334ರ ಮೂಲಕ ನಾವು ನಿರ್ದೇಶನ ಪಡೆಯುವುದು ಅನಗತ್ಯ. ಸಂಸತ್ತಿನ ಮೂಲಕ ಅನುಚ್ಛೇದ 334 ತಿದ್ದುಪಡಿಯಾಗದಿದ್ದರೂ, ವಿಸ್ತರಣೆ ನೀಡುವ ಅಧಿಕಾರ ಈ ಸದನಕ್ಕಿದೆ. ಪ್ರಾಸಂಗಿಕವಾಗಿ, ಅವರು ಅನುಚ್ಛೇದ 334ರ ಬಗ್ಗೆ ಉಲ್ಲೇಖಿಸಿದ್ದಾರೆ. ವಾಸ್ತವವಾಗಿ ಅದು ಸ್ಥಳೀಯ ಸಂಸ್ಥೆಗಳಿಗೆ ಅನ್ವಯವಾಗುವುದಿಲ್ಲ. ಸ್ಥಳೀಯ ಸಂಸ್ಥೆಗಳಿಗೆ ನಿಮ್ಮ ಮಂಜೂರಾತಿಯನ್ನು ನೀಡಿ ಅನುಕಂಪವನ್ನು

ಹೆಚ್ಚಿಸಿಕೊಂಡಿರುವಾಗ ಈ ಒಂದು ಸಣ್ಣ ತಿದ್ದುಪಡಿಯನ್ನು ಬೆಂಬಲಿಸುವುದರ ಮೂಲಕ ನಿಮ್ಮ ಅನುಕಂಪವನ್ನು ತೋರಿಸುವಲ್ಲಿ ಆಗಿರುವ ಅಡಚಣೆಯಾದರೂ ಏನು?

**ಶ್ರೀ ಬಿ. ಶ್ಯಾಮಸುಂದರ್:-** ಮುಸಲ್ಮಾನರು ಮತ್ತು ಇತರರೂ ಕೂಡ ಈ ಒಂದು ವೈಫಲ್ಯದಿಂದ ನರಳುತಿದ್ದಾರೆಂದು ಈಗ ತಾನೆ ನನ್ನ ಸ್ನೇಹಿತರು ಹೇಳಿದರು. ಈ ಎಲ್ಲಾ ಸಮುದಾಯಗಳಿಗೆ ಇದೇ ಮೀಸಲಾತಿಯನ್ನು ನೀಡಲು ಅವರು ಸಿದ್ಧರಿದ್ದಾರೆಯೇ?

**ಶ್ರೀ ಆರ್. ಚೆನ್ನಿಗರಾಮಯ್ಯ:-** ಇಲ್ಲ.

**ಶ್ರೀ ಬಿ. ಶ್ಯಾಮಸುಂದರ್:-** ಈ ತಾರತಮ್ಯ ಏಕೆ?

# ಮೈಸೂರು ರಾಜ್ಯದಲ್ಲಿ ಪ್ರಜಾಪ್ರಭುತ್ವದ ಅಂಗಛೇದನ

**ಶ್ರೀ ಬಿ. ಶ್ಯಾಮಸುಂದರ್:**– ಮಾನ್ಯ ಸಭಾಧ್ಯಕ್ಷರೇ, ನಾನು ಸಮಾಜ ಕಲ್ಯಾಣ ಇಲಾಖೆ ಹಾಗೂ ಗ್ರಾಮೀಣಾಭಿವೃದ್ಧಿ ಇಲಾಖೆಯ ಬಗ್ಗೆ ಏನನ್ನಾದರೂ ಹೇಳುವುದಕ್ಕೆ ಮುಂಚೆ ಪ್ರಜಾಪ್ರಭುತ್ವಕ್ಕೆ ಸಂಬಂಧಿಸುವಷ್ಟರಮಟ್ಟಿಗೆ ನಮ್ಮ ರಾಜ್ಯದಲ್ಲಿ ರೂಢಿಯಲ್ಲಿರುವ ಕಟ್ಟುಪಾಡುಗಳ ಬಗ್ಗೆ ಒಂದು ಅಥವಾ ಎರಡು ಮಾತುಗಳನ್ನು ಹೇಳಬಯಸುತ್ತೇನೆ. ಒಬ್ಬ ವಿದ್ಯಾರ್ಥಿಯನ್ನು ಅನೇಕ ತಿಂಗಳವರೆಗೆ ಡಿಬಾರ್ ಮಾಡಲಾಗಿದ್ದು ಅವನಿಗೆ ತನ್ನ ವಿದ್ಯಾಭ್ಯಾಸವನ್ನು ಮುಂದುವರಿಸಲು ಅವಕಾಶ ನೀಡಿರಲಿಲ್ಲ ಎಂಬ ವಿಷಯವನ್ನು ಕೆಲವು ದಿನಗಳ ಹಿಂದೆ ನಾನು ಪತ್ರಿಕೆಯಲ್ಲಿ ಓದಿದ್ದೆ. ವಿಶ್ವದ್ಯಾನಿಲಯವು ಒಂದು ಸ್ವಾಯತ್ತ ಸಂಸ್ಥೆ ಎಂಬುದರಲ್ಲಿ ಸಂದೇಹವಿಲ್ಲ, ಆದರೆ ವಿಶ್ವದಲ್ಲಿ ಎಲ್ಲಿಯೂ ಪ್ರಜಾಪ್ರಭುತ್ವದಲ್ಲಿ ಅಧಿಕಾರವನ್ನು ಈ ರೀತಿ ವಿಶ್ವವಿದ್ಯಾನಿಲಯದಲ್ಲಿ ಆಗಲಿ ಅಥವಾ ಸರ್ಕಾರದಲ್ಲಿ ಆಗಲಿ ಬಳಸಿಕೊಂಡಿಲ್ಲ. ಯಾತಕ್ಕಾಗಿ ಈ ಜನರು ಈ ರೀತಿಯ ಕಿರುಕುಳ ನೀಡುತ್ತಾರೆ ಎಂಬುದು ನನಗೆ ಗೊತ್ತಿಲ್ಲ. ವಿಶ್ವವಿದ್ಯಾನಿಲಯದಿಂದ ವಿದ್ಯಾರ್ಥಿಗಳನ್ನು ಹೊರಹಾಕಲಾಗುತ್ತಿದೆ. ಅವನು ನನ್ನ ಗೆಳೆಯರಲ್ಲಿ ಒಬ್ಬರಾದ ಈ ಸಭೆಯ ಸದಸ್ಯನ ಮಗನೆಂಬುದು ಆಮೇಲೆ ನನಗೆ ಹೇಳಲಾಯಿತು. ನ್ಯಾಯಾಲಯದಲ್ಲಿ ಮೊಕದ್ದಮೆಯ ವಿಚಾರಣೆ ನಡೆಯುತ್ತಿರುವುದಾಗಿ ನನಗೆ ಕೇಳಿಬಂದಿತು. ಈ ಪ್ರಕರಣವು ನ್ಯಾಯಾಲಯಕ್ಕೆ ಹೋಗಿ ತಡೆಯಾಜ್ಞೆಯನ್ನು ಪಡೆದಿರುವುದು ಎಷ್ಟು ದುರದೃಷ್ಟಕರ.

ಈ ಕೆಲವು ಮಾತುಗಳನ್ನು ಮುಗಿಸಿದ ನಂತರ, ನಾನು ನನಗೆ ಸಂಬಂಧಪಟ್ಟ ವಿಷಯಕ್ಕೆ ಬರುತ್ತೇನೆ. ಈ ಸಭೆಯಲ್ಲಿ ನಾವು ನಡೆಸುವ ಕಾರ್ಯಕಲಾಪಗಳ ಬಗ್ಗೆ ಯಾರಾದರೂ ಒಂದು ಪುಸ್ತಕವನ್ನು ಬರೆಯಬೇಕು ಎಂಬುದು ನನ್ನ ಭಾವನೆ. ಅವರು ನಮ್ಮ ಭಾಷಣಗಳು, ನಮ್ಮ ಚರ್ಚೆಗಳು ಮತ್ತು ನಮ್ಮ ಕಾರ್ಯಗಳ ಬಗ್ಗೆ ವಿವರವಾಗಿ ಚರ್ಚಿಸಲು ಅನುಮತಿಯನ್ನು ನೀಡಿರಿ. ನಮ್ಮ ಎಲ್ಲಾ ಕಾರ್ಯಗಳ ಬಗ್ಗೆ ಮುಂದೆ ಬರುವ ಪೀಳಿಗೆಯು ಓದಿ ತಿಳಿದುಕೊಳ್ಳಲು ಅವಕಾಶ ನೀಡಿರಿ. ನಾನು ಪುಸ್ತಕಕ್ಕೆ ಹೆಸರು ಕೊಡುತ್ತೇನೆ. ಮೊದಲು ನನ್ನ ಭಾವನೆಗೆ ಬಂದ ಹೆಸರು 'ಪ್ರಜಾಪ್ರಭುತ್ವದ ಕೊಲೆ' ತದನಂತರ 'ಕೊಲೆ' ಎಂಬುದು ಸೂಕ್ತವಾದ ಪದವಲ್ಲ ಎಂಬುದಾಗಿ ನನ್ನ ಭಾವನೆಗೆ ಬಂದಿತು. ಪುಸ್ತಕಕ್ಕೆ "ಮೈಸೂರು ರಾಜ್ಯದಲ್ಲಿ ಪ್ರಜಾಪ್ರಭುತ್ವದ ಅಂಗಛೇದನ" ಎಂಬುದಾಗಿ ಹೆಸರು ಕೊಡುತ್ತೇನೆ. ಪ್ರಜಾಪ್ರಭುತ್ವವನ್ನು ಛಿದ್ರ ಛಿದ್ರವಾಗಿ ತುಂಡರಿಸಲಾಗುತ್ತಿದೆ. ಈ ಮಾರ್ಗದಲ್ಲಿಯೇ ನಾವು ಸಾಗುತ್ತಿದ್ದೇವೆ. ಕಳೆದ ಬಾರಿ ನಾನು ಮಾತನಾಡಿದಾಗ ಒಂದು ಮುಖ್ಯವಾದ ವಿಷಯವನ್ನು ನಾನು ಪ್ರಸ್ತಾಪಿಸಿದ್ದೆ. ಸರ್ಕಾರಕ್ಕಿಂತ ಹೆಚ್ಚಾಗಿ ಆದರೆ ಮಂತ್ರಿಗಿಂತ ಹೆಚ್ಚಾಗಿರದೆ, ಸರ್ಕಾರ ಹಾಗೂ ಮಂತ್ರಿಯ ನಡುವೆ ಅಗಾಧವಾದ ವ್ಯತ್ಯಾಸವಿದೆ ಎಂಬುದಾಗಿ ಪ್ರಭಾರಿ ಮಂತ್ರಿಯವರಿಗೆ ಆಗ್ರಹಪೂರ್ವಕವಾಗಿ ಹೇಳಿದ್ದೇನೆ. ಪ್ರತಿಯೊಬ್ಬ ಮಂತ್ರಿಯು, ಬಂದು "ನಾನೇ ಸರ್ಕಾರ" ಎಂದು ಹೇಳುತ್ತಾರೆ.

ಇದೆಲ್ಲವೂ ಶುದ್ಧ ಅಸಂಬದ್ಧ, ಯಾವ ಮಂತ್ರಿಯೂ ಸರ್ಕಾರವಾಗಲಾರ. ಮಂತ್ರಿಗಳ ಪರಿಷತ್ತು ಮಂತ್ರಿಮಂಡಲದ ಸಭಾಮಂದಿರದಲ್ಲಿ ಕುಳಿತುಕೊಂಡಿದ್ದು, ಮುಖ್ಯಮಂತ್ರಿಯವರು ಅಧ್ಯಕ್ಷರಾಗಿ ಕುಳಿತುಕೊಂಡು ಅವರು ಆದೇಶವನ್ನು ಅಥವಾ ನಿರ್ಣಯವನ್ನು ಹೊರಡಿಸಿದಾಗ ಮಾತ್ರ, ಅಂತಹ ನಿರ್ಣಯವನ್ನು ಸರ್ಕಾರದ ನಿರ್ಣಯ ಅಥವಾ ಸರ್ಕಾರದ ಆದೇಶವೆಂದು ಕರೆಯಲಾಗುತ್ತದೆ. ಮಂತ್ರಿಯು ಯಾವುದೇ ಆದೇಶವನ್ನು ನೀಡುವಂತಿರುವುದಿಲ್ಲ. ಈ ಅಂಶವನ್ನು ಮನಸ್ಸಿನಲ್ಲಿಟ್ಟುಕೊಂಡು, ನಾನು ಸಮಾಜ ಕಲ್ಯಾಣ ಇಲಾಖೆಯ ವ್ಯವಹಾರಗಳ ಕುರಿತಂತೆ ಇಲಾಖೆಯಲ್ಲಿ ಏನು ತಪ್ಪು ನಡೆದಿದೆ ಎಂಬುದನ್ನು ನೋಡಲು ತನಿಖೆ ಮಾಡುವಂತೆ ನಾನು ಸರ್ಕಾರವನ್ನು ಒತ್ತಾಯಿಸಿದ್ದೇನೆ. ನಾವು ಇಲಾಖೆಯ ಬಗ್ಗೆ ಹಲವಾರು ಕತೆಗಳನ್ನು ಕೇಳಿದ್ದೇವೆ. ಸರ್ಕಾರವು ಈ ಬಗ್ಗೆ ತನಿಖೆ ನಡೆಸಿ, ವರದಿ ಸಲ್ಲಿಸಲಿ, ಈಗ ಅವರಿಗೆ ಅದನ್ನು ಮಾಡಲು ಇಷ್ಟವಿಲ್ಲ. ಅವರು ತಮ್ಮ ಸ್ವಂತ ಒಪ್ಪಿಗೆಯಿಂದ ತೀರ್ಮಾನ ಕೊಡುವ ವ್ಯಕ್ತಿಗಳಾಗಿದ್ದಾರೆ. ಯಾವುದೇ ವಿಚಾರಣೆ ನಡೆಸುವ ಅಗತ್ಯವಿಲ್ಲವೆಂದು ಮಂತ್ರಿಯು ಹೇಳುತ್ತಾರೆ. ನಾನು ಏನು ಹೇಳುತ್ತಿದ್ದೇನೆ ಎಂಬುದರ ಬಗ್ಗೆ ಗಮನಹರಿಸಲು ಮತ್ತು ಇಡೀ ವಿಷಯದ ಬಗ್ಗೆ ತನಿಖೆ ನಡೆಸುವಂತೆ ಮುಖ್ಯಮಂತ್ರಿಗೆ ನೀವು ನಿರ್ದೇಶಿಸುವಂತೆ ನಾನು ಕೋರುತ್ತೇನೆ. ನಾನು ಈ ಬಗ್ಗೆ ಒಂದು ಪತ್ರವನ್ನು ಮಾನ್ಯ ಮುಖ್ಯಮಂತ್ರಿಗಳಿಗೆ ಬರೆದಿದ್ದೇನೆ. ಸಂಬಂಧಪಟ್ಟ ಮಂತ್ರಿಗಳು ನನ್ನ ಚುನಾವಣಾ ಕ್ಷೇತ್ರಕ್ಕೆ ಅಂದರೆ ಗುಲ್ಬರ್ಗಕ್ಕೆ ಭೇಟಿ ನೀಡಿದ್ದು, ಗುಲ್ಬರ್ಗ ವಿದ್ಯಾರ್ಥಿನಿಲಯದಲ್ಲಿರುವ ವಿದ್ಯಾರ್ಥಿಗಳನ್ನು ಕುರಿತು ಭಾಷಣ ಮಾಡಿದರೆಂದು ನನಗೆ ಅವರು ಹೇಳಿದರು. ಅವರು, ವರ್ಗಗಳ ಜನರನ್ನು ವಿಭಜಿಸಲು ಪ್ರಯತ್ನಿಸಿದ್ದಾರೆ ಹಾಗೂ ಈ ಸುದ್ದಿಯು ಹಿಂದೂ ಪತ್ರಿಕೆಯಲ್ಲಿ ಪ್ರಕಟವಾಗಿದ್ದು, ಇದನ್ನು ಹಿಂದೂ ಪತ್ರಿಕೆಯಲ್ಲಿ ವರದಿ ಮಾಡಲಾಗಿತ್ತು.

**ಅಪರಾಹ್ನ 3-00 ಗಂಟೆ.**

ಮಾನ್ಯರೇ, ದೇಶದಲ್ಲಿರುವ ಈ ಕೋಮುವಾದವನ್ನು ನಾವು ತೊಲಗಿಸಬೇಕಾಗಿದೆ. ಈ ಕೋಮುವಾದವು ತೊಲಗಬೇಕೆಂದು ನಾವು ಬಯಸಿರುವಾಗ ಪಂಗಡ ಭಾವನೆಯನ್ನು ಯಾತಕ್ಕೆ ಮಾಡಬೇಕು? ಮಂತ್ರಿಗಳು ಇವರು ಯಾವುದೇ ರೀತಿಯಾಗಿ ಇದರ ಪರವಾಗಿ ಇಲ್ಲವೇ ಇಲ್ಲ. ಆದರೆ ಇತರರು ಇದನ್ನು ಪಾಲಿಸುತ್ತಿದ್ದಾರೆ ಎಂದು ಹೇಳುತ್ತಾರೆ. ಇದನ್ನು ನೀವು ಹೇಳಿದ್ದಿರೋ ಅಥವಾ ಹೇಳಿಲ್ಲವೋ ಎಂಬ ಸಂಗತಿಯನ್ನು ನಾನು ತಿಳಿದುಕೊಳ್ಳಬೇಕಾಗಿದೆ. ಮಾನ್ಯರೇ, ಇನ್ನೊಂದು ಸ್ಥಳದಲ್ಲಿ, ಅಂದರೆ, ಗಾಜಿಪುರದಲ್ಲಿ ಇವರು, ಜನರನ್ನು ಕಾಂಗ್ರೆಸಿಗೆ ಸೇರಬೇಕೆಂದು ಮತ್ತು ಎಲ್ಲ ಕಾರ್ಯಕ್ಷೇತ್ರಗಳಲ್ಲಿಯೂ ಅವರ ಪರಿಸ್ಥಿತಿಗಳನ್ನು ಉತ್ತಮಪಡಿಸಲು ಕಾಂಗ್ರೆಸ್ ಪಕ್ಷಕ್ಕೆ ಮಾತ್ರ ಸಾಧ್ಯ ಎಂಬುದಾಗಿ ಹೇಳಿದ್ದಾರೆ. ಮಾನ್ಯರೇ, ಮಂತ್ರಿಗಳು ಸರ್ಕಾರದ ಖರ್ಚಿನಲ್ಲಿ ಪ್ರವಾಸ ಕೈಗೊಂಡಿರುವಾಗ, ಅವರು ತಮ್ಮ ಸ್ವಂತ ಪಕ್ಷದ ಪರವಾಗಿ ವಕಾಲತ್ತು ವಹಿಸಬಹುದೇ? ಖಂಡಿತವಾಗಿಯೂ ಇಲ್ಲ. ಇದು ಪ್ರಜಾಪ್ರಭುತ್ವದ ರೀತಿಯೇ ಹಾಗೂ ನಾವು ಸಭ್ಯ ರೀತಿಯಲ್ಲಿ ಪ್ರಜಾಪ್ರಭುತ್ವವನ್ನು ನಡೆಸುತಿದ್ದೇವೆಯೇ?

**ಶ್ರೀ ಎನ್. ರಾಚಯ್ಯ (ಕೃಷಿ ಮತ್ತು ಸಮಾಜ ಕಲ್ಯಾಣ ಮಂತ್ರಿಗಳು):-** ಮಾನ್ಯರೇ, ಸದಸ್ಯರು 'ಗಾಳಿ ವರ್ತಮಾನ' ಮಾಹಿತಿಯ ಆಧಾರದ ಮೇಲೆ ಮಾತ್ರ ಮಾತನಾಡುತ್ತಿದ್ದಾರೆ ಮತ್ತು ಅದು ಖಂಡಿತವಾಗಿಯೂ ಸರಿಯಲ್ಲ ಹಾಗೂ ಸುಳ್ಳು ಸುದ್ದಿ ಆಗಿರುತ್ತದೆ.

**ಶ್ರೀ ಬಿ. ಶ್ಯಾಮಸುಂದರ್:-** ನಾನು ಇದರ ಬಗ್ಗೆ ಮುಖ್ಯಮಂತ್ರಿಗಳಿಗೆ ಪತ್ರ ಬರೆದಿದ್ದೇನೆ. ಮಾನ್ಯ ಮಂತ್ರಿಗಳಿಂದ ನಾನು ಸರಿಯಾದ ಹೇಳಿಕೆಯನ್ನು ನಿರೀಕ್ಷಿಸುವುದಿಲ್ಲ, ಏಕೆಂದರೆ, ಅವರೇ ಆಪಾದಕರು, ಆಪಾದಿತರು ಹಾಗೂ ನ್ಯಾಯಾಧೀಶರು ಆಗಿರುತ್ತಾರೆ. ಮುಖ್ಯಮಂತ್ರಿಗಳು ಈ ವಿಷಯವು ನಿಜವೇ ಅಥವಾ ಅಲ್ಲವೇ ಎಂಬುದರ ಬಗ್ಗೆ ತನಿಖೆ ನಡೆಸಬೇಕಾಗಿ ನಾನು ಬಯಸುತ್ತೇನೆ. ಈ ಎಲ್ಲ ವಿಷಯಗಳು ಇರುವುದು ಬೇಡವಾದರೆ ಹೀಗೆ ಮಾಡಲಿ. ಶ್ರೀ ಎನ್. ರಾಚಯ್ಯನವರು, ಈ ಪ್ರಶ್ನೆಯನ್ನು ಕಾಂಗ್ರೆಸ್ ಶಾಸಕಾಂಗ ಪಕ್ಷದ ಸಭೆಯಲ್ಲಿ ಪ್ರಸ್ತಾಪ ಮಾಡಿದರೆಂದು ನನಗೆ ಹೇಳಿದ್ದು, ಇದೂ ಸಹ ನಿಜವಲ್ಲವೇ ಹಾಗೂ ಇದು 'ಗಾಳಿ ವರ್ತಮಾನ' ಮಾತ್ರ ಆಗಿರುತ್ತದೆಯೇ ಎಂಬುದನ್ನು ನಾನು ತಿಳಿದುಕೊಳ್ಳಬಯಸುತ್ತೇನೆ.

## ವಿದ್ಯಾರ್ಥಿ ನಿಲಯಗಳ ಬಗ್ಗೆ ಚರ್ಚೆ

**ಶ್ರೀ ಬಿ. ಶ್ಯಾಮಸುಂದರ್:-** ಮಾನ್ಯರೇ, ನಾನು ಸಮಾಜ ಕಲ್ಯಾಣ ಇಲಾಖೆಯ ಬಗ್ಗೆ ಮಾತನಾಡಿದ್ದು ಒಬ್ಬ ವಿದ್ಯಾರ್ಥಿಯ ಬಗ್ಗೆ ಪ್ರಸ್ತಾಪಡಿಸಿದ್ದೇನೆ. ಇದೀಗ, ಈಕಡೆ ಇರುವ ನನ್ನ ಸ್ನೇಹಿತರು, ಪ್ರಕರಣವು ನ್ಯಾಯಾಲಯದ ಮುಂದೆ ಹೋಗಿರುವುದಾಗಿ ನನಗೆ ತಿಳಿಸಿದರು. ಇದಕ್ಕಾಗಿ ನನ್ನನ್ನು ಕ್ಷಮಿಸಿ, ಇದು ನನಗೆ ಗೊತ್ತಿರಲಿಲ್ಲ, ಇದು ನ್ಯಾಯ ವಿಚಾರಣಾಧೀನವಾದುದು. ಮಾನ್ಯರೆ, ಮುಖ್ಯಮಂತ್ರಿಗಳು ಇಲ್ಲಿ ಇಲ್ಲ. ನನ್ನನ್ನು ಕ್ಷಮಿಸಿ, ನಾನು ಸಮಾಜ ಕಲ್ಯಾಣ ಇಲಾಖೆಯ ಆಡಳಿತದ ಬಗ್ಗೆ ಬಹಳ ಕಾಳಜಿ ವಹಿಸಿದ್ದೆ, ಆದ್ದರಿಂದ ಇಲ್ಲಿರಬೇಕಾಗಿತ್ತೆಂದು ನಾನು ಅಪೇಕ್ಷಿಸಿದ್ದೆ.

**ಮಾನ್ಯ ಉಪ ಸಭಾಧ್ಯಕ್ಷರು:-** ಸಂಬಂಧಪಟ್ಟ ಸಚಿವರು ಇಲ್ಲಿದ್ದಾರೆ.

**ಶ್ರೀ ಬಿ. ಶ್ಯಾಮಸುಂದರ್:-** ಮಾನ್ಯರೇ, ನಾನು ಮುಖ್ಯಮಂತ್ರಿಯವರೊಂದಿಗೆ ಮಾತಾಡಬೇಕಾಗಿ ಬಯಸಿದ್ದು, ನಾನು ಸಮಾಜ ಕಲ್ಯಾಣ ಸಚಿವರು ನನ್ನ ಚುನಾವಣಾ ಕ್ಷೇತ್ರಕ್ಕೆ ಬಂದಿದ್ದಾಗ, ಅವರು ಹೇಳಿದ್ದ ಮಾತುಗಳನ್ನು ಪ್ರಸ್ತಾಪಿಸುತ್ತಿದ್ದೆ. ಅವರು ಇದೆಲ್ಲವೂ 'ಗಾಳಿ ವರ್ತಮಾನ' ಎಂದು ಹೇಳಿದ್ದಾರೆ. ಅದು ಹಾಗೆಯೇ ಆಗಿರಲಿ ಎಂದು ಬಯಸುತ್ತೇನೆ. ಆದರೆ, ನನ್ನ ಗಮನಕ್ಕೆ ಬಂದಿರುವುದು ಇದೊಂದೇ ಘಟನೆಯಲ್ಲ. ಅಂಥ ಅನೇಕ ಘಟನೆಗಳನ್ನು ನನ್ನ ಗಮನಕ್ಕೆ ತರಲಾಗಿದೆ. ವಿದ್ಯಾರ್ಥಿನಿಲಯಗಳ ಹಂಚಿಕೆಗಳನ್ನು ಕೆಲವು ಪರ್ಯಾಲೋಚನೆಗಳ ಮೇಲೆ ನೀಡಲಾಗಿದೆ ಎಂದು ನನಗೆ ಹೇಳಿದ್ದಾರೆ. ವಿದ್ಯಾರ್ಥಿಗಳಿಗೆ ನೀಡುವ ಆರ್ಥಿಕ ನೆರವನ್ನೂ ಸಹ ಕೆಲವು ಪರ್ಯಾಲೋಚನೆಗಳ ಮೇಲೆ ನೀಡಲಾಗಿದೆ. ನಾನು ಇದನ್ನು ಸಚಿವರ ಗಮನಕ್ಕೆ ತರಬಯಸುತ್ತೇನೆ.

**ಅಪರಾಹ್ನ 3.50 ಗಂಟೆ**

ಗೊತ್ತಿದ್ದೋ ಅಥವಾ ಗೊತ್ತಿಲ್ಲದೆಯೋ ನಾನು ಸಚಿವರನ್ನು ವಿರೋಧಿಸಲು ಅಥವಾ ಅವರಿಗೆ ಕೆಟ್ಟ ಹೆಸರನ್ನು ತರಲು ಬಯಸುವುದಿಲ್ಲ. ಅವರು ಯಾವ ಮನಃಸ್ಥಿತಿಯಲ್ಲಿದ್ದರು ಎಂಬುದು ನನಗೆ ಗೊತ್ತಿಲ್ಲ. ಆದರೆ ಆಡಳಿತಾತ್ಮಕವಾಗಿ ಅದು ಸರಿಯಾಗಿತ್ತೇ ಅಥವಾ ಅಪೇಕ್ಷಣೀಯವಾಗಿತ್ತೇ ಅಥವಾ ಅದು ಸಾರ್ವಜನಿಕರ ಅಥವಾ ರಾಜ್ಯದ ಹಿತಾಸಕ್ತಿಯನ್ನು ಹೊಂದಿತ್ತೇ ಎಂಬುದು ಮಾತ್ರ ನನ್ನ ಪ್ರಶ್ನೆಯಾಗಿರುತ್ತದೆ. ವಿದ್ಯಾರ್ಥಿನಿಲಯಗಳು, ಆರ್ಥಿಕ ನೆರವು, ಕೃಷಿ ಕಾಲೋನಿಗಳು ಮತ್ತು ಇತ್ಯಾದಿಗಳಿಗೆ ಸಂಬಂಧಿಸಿದಂತೆ ಅನೇಕ ಉದಾಹರಣೆಗಳನ್ನು ನಾನು ಕೊಡುತ್ತೇನೆ. ರಾಜ್ಯದಾದ್ಯಂತ ಕೃಷಿ ಕಾಲೋನಿಗಳನ್ನು ಸ್ಥಾಪಿಸಲಾಗಿದ್ದು ಅವುಗಳನ್ನು ಯಾವುದೋ ಪ್ರತಿಫಲಗಳನ್ನು ಪಡೆದು ಹಂಚಿಕೆ ಮಾಡಲಾಗಿರುತ್ತದೆ ಎಂಬುದಾಗಿ ನನಗೆ ಹೇಳಿದ್ದಾರೆ. ಯುಕ್ತವಾದ ತನಿಖೆಯನ್ನು ಮಾಡಿದ್ದಾದರೆ, ಅನೇಕ ಸಂಗತಿಗಳು ಬೆಳಕಿಗೆ ಬರುತ್ತವೆ.

**ಶ್ರೀ ಎನ್. ರಾಚಯ್ಯ:–** ಸರ್ಕಾರವು ವಾಸ್ತವವಾಗಿ, ಎಲ್ಲ ಜಿಲ್ಲೆಗಳಿಗೆ ಜನಸಂಖ್ಯೆ ಆಧಾರದ ಮೇಲೆ ಸಮುದಾಯ ಕೇಂದ್ರಗಳು, ಬಾವಿಗಳು, ಆರ್ಥಿಕ ನೆರವು ಮತ್ತು ವಸತಿ ನಿರ್ಮಾಣ ಸಂಬಂಧವಾಗಿ ಹಣವನ್ನು ವಿತರಿಸಿರುತ್ತದೆ. ಇದನ್ನು ಜಿಲ್ಲಾಧಿಕಾರಿಗಳು ಸ್ಥಳೀಯ ತಹಶೀಲ್ದಾರರ ಮುಖಾಂತರ ಕಾರ್ಯಾಚರಣೆ ಮಾಡುತ್ತಾರೆ. ವಿದ್ಯಾರ್ಥಿನಿಲಯಗಳ ಸಂಬಂಧದಲ್ಲಿಯೂ ಕೂಡ ನಾವು ಅವುಗಳನ್ನು ನೇರವಾಗಿ ಯಾರಿಗೂ ಕೊಡುವುದಿಲ್ಲ. ಸಮಾಜ ಕಲ್ಯಾಣ ಕೆಲಸಗಳ ಸಂಬಂಧದಲ್ಲಿಯೂ ಸಹ, ನಾವು ಜಿಲ್ಲಾಧಿಕಾರಿಗಳ ಏಜನ್ಸಿಯ ಮೂಲಕ ಮಾತ್ರವೇ ವಿತರಿಸುತ್ತೇವೆ. ಮಾನ್ಯ ಸದಸ್ಯರು ಸರ್ಕಾರವನ್ನು ಟೀಕೆ ಮಾಡುವುದಕ್ಕೆ ಮೊದಲು ಕಾರ್ಯವಿಧಾನವನ್ನು ತಿಳಿದುಕೊಂಡಿರಬೇಕೆಂದು ನಾನು ಬಯಸುತ್ತೇನೆ.

**ಶ್ರೀ ಬಿ. ಶ್ಯಾಮಸುಂದರ್:–** ಕ್ಷಮಿಸಿ, ಮಂತ್ರಿಗಳು ನಾನು ಹೇಳಿದ ಅಂಶವನ್ನು ಗ್ರಹಿಸಲು ಪ್ರಯತ್ನಪಟ್ಟಿಲ್ಲ. ಬಜೆಟ್ ಕುರಿತ ಸಾಮಾನ್ಯ ಚರ್ಚೆಗಳ ಅವಧಿಯಲ್ಲಿ, 30ರಿಂದ 40 ವಿದ್ಯಾರ್ಥಿಗಳಿರುವ ವಿದ್ಯಾರ್ಥಿನಿಲಯಗಳು, ಲಕ್ಷ ಮತ್ತು ಅದಕ್ಕಿಂತಲೂ ಹೆಚ್ಚು ಮೊತ್ತದಷ್ಟರವರೆಗೆ ನೆರವನ್ನು ಪಡೆಯುತ್ತಿದ್ದರೆ, 200ಕ್ಕೂ ಹೆಚ್ಚು ವಿದ್ಯಾರ್ಥಿಗಳಿರುವ ಗುಲ್ಬರ್ಗದ ವಿದ್ಯಾರ್ಥಿನಿಲಯಗಳು ಅಷ್ಟರಮಟ್ಟಿಗಿನ ನೆರವನ್ನು ಪಡೆದುಕೊಳ್ಳಲು ವಿಫಲವಾಗಿವೆ ಎಂಬುದನ್ನು ನಾನು ಎತ್ತಿ ತೋರಿಸಿದ್ದೇನೆ.

**ಶ್ರೀ ಎನ್. ರಾಚಯ್ಯ:** ನಾವು ಹಣವನ್ನು ಮಂಜೂರು ಮಾಡಿದ್ದರೂ, ಅಂದಾಜುಗಳು ಮತ್ತು ಯೋಜನೆಗಳು ಅಥವಾ ಪರಿಷ್ಕೃತ ಅಂದಾಜುಗಳು ಮತ್ತು ಯೋಜನೆಗಳನ್ನು ಉಚಿತ ಮಾರ್ಗದ ಮುಖಾಂತರ ಸ್ಥಳೀಯ ಪ್ರಾಧಿಕಾರಗಳಿಂದ ಸ್ವೀಕರಿಸುವವರೆಗೆ ಮತ್ತು ಸ್ವೀಕರಿಸಿದ ಹೊರತು, ಆದೇಶಗಳನ್ನು ಹೊರಡಿಸುವುದಿಲ್ಲ ಎಂಬುದನ್ನು ನಾನು ಮಾನ್ಯ ಸದಸ್ಯರ ಗಮನಕ್ಕೆ ತರುತ್ತೇನೆ.

**ಶ್ರೀ ಬಿ. ಶ್ಯಾಮಸುಂದರ್:–** ಅದು ನನಗೆ ಗೊತ್ತು. ನಾನು, ಆಗಿರುವ ವಿಳಂಬಗಳ ಬಗ್ಗೆ ಅಥವಾ ಒಳಗೊಂಡಿರುವ ಕೆಂಪುಪಟ್ಟಿ ಬಗ್ಗೆ ಪ್ರತಿಬಿಂಬಿಸುತ್ತಿಲ್ಲ. ನನ್ನ ಅಸಮಾಧಾನದ ಕಾರಣ ಏನೆಂದರೆ, ಕೇವಲ 30 ವಿದ್ಯಾರ್ಥಿಗಳಿರುವ ವಿದ್ಯಾರ್ಥಿನಿಲಯಗಳು ಅಗಾಧ ಪ್ರಮಾಣದ ಅನುದಾನಗಳನ್ನು ಪಡೆದರೆ, 200 ಹಾಗೂ ಅದಕ್ಕೂ ಹೆಚ್ಚು ವಿದ್ಯಾರ್ಥಿಗಳಿರುವ ವಿದ್ಯಾರ್ಥಿನಿಲಯಗಳು ಅದೇ ರೀತಿಯ ಉಪಚಾರವನ್ನು ಪಡೆದಿಲ್ಲ.

**ಶ್ರೀ ಎನ್. ರಾಚಯ್ಯ:–** ದಯವಿಟ್ಟು ನನಗೆ ಪತ್ರ ಬರೆಯಿರಿ, ನಾನು ಅದನ್ನು ಪರಿಶೀಲಿಸುತ್ತೇನೆ.

# ಸಂವಿಧಾನದಲ್ಲಿ ಮಾತ್ರ ಅಸ್ಪೃಶ್ಯತೆ ಕೊನೆಗಾಣಿಸಲಾಗಿದೆ

**ಶ್ರೀ ಬಿ. ಶ್ಯಾಮಸುಂದರ್:-** ನಾನು ಇದನ್ನು ನಿಮಗೆ ಅನೇಕ ಸಲ ಹೇಳಿದ್ದೇನೆ, ಅನೇಕ ಮನವಿಗಳನ್ನು ಸಲ್ಲಿಸಿದ್ದೇನೆ. ವಿದ್ಯಾರ್ಥಿಗಳು ಸ್ವತಃ ತಾವೇ ಅನೇಕ ಸಲ ನಿಮಗೆ ಪತ್ರ ಬರೆದಿದ್ದಾರೆ. ನಿಮಗೆ ಪರಿಸ್ಥಿತಿಯ ಅರಿವು ಇರುವಾಗ, ನೀವು ನನ್ನನ್ನೇ ಪತ್ರ ಬರೆಯಲು ಏಕೆ ಹೇಳುತ್ತೀರಿ? ಇನ್ನೊಂದು ದಿನ ನೀವು, ಶ್ಯಾಮಸುಂದರ್ ವಿಮಾನದಲ್ಲಿ ದೆಹಲಿಗೆ ಹಾರಿಹೋಗಲು ಬಹಳ ಇಷ್ಟಪಡುವುದರಿಂದ ಅವರು ಮಂತ್ರಿಗೆ ಪತ್ರ ಬರೆಯುವಲ್ಲಿ ಆಸಕ್ತಿ ತೋರುವುದಿಲ್ಲವೆಂದು ಹೇಳಿದ್ದೀರಿ. ನಾನು ಯಾವುದೇ ಕಾರಣಕ್ಕಾಗಿ ದೆಹಲಿಗೆ ಹೋಗಿರಲಿಲ್ಲ. ನಾನು, ಈ ವಿಷಯಗಳ ಬಗ್ಗೆ ಕೇಂದ್ರ ಸರ್ಕಾರಕ್ಕೆ ಮನವಿಗಳನ್ನು ಮಾಡಿಕೊಂಡಿದ್ದು ಅನೇಕ ಭಾರಿ ಅವರಿಂದ ನಿಮಗೆ ಸೂಚನೆಗಳನ್ನು ನೀಡಲಾಗಿದೆ. ನಾನು ಲೋಕಸಭೆಗೂ ಕೂಡ ಅರ್ಜಿಗಳನ್ನು ಸಲ್ಲಿಸಿದ್ದೇನೆ. ನಾನು ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಕರಣದ ಬಗ್ಗೆ ಹೋರಾಟ ಮಾಡಿದ್ದು, ಇದು ಭಾರತಕ್ಕಷ್ಟೇ ಅಲ್ಲ, ಇಡೀ ವಿಶ್ವವನ್ನೇ ಕಣ್ತೆರೆಯಿಸುವ ವಿಷಯವಾಗಿದೆ. ನ್ಯಾಯಾಲಯದ ಮುಂದಿದ್ದ ವಿವಾದವು ಏನೆಂದರೆ, ಒಬ್ಬ ಹರಿಜನನಾದವನು, ಪರಿವರ್ತನೆಯಾಗಿರುವಾಗ ಅಥವಾ ತನ್ನ ಜಾತಿಯನ್ನು ಬದಲಾಯಿಸಿರುವಾಗ, ಅವನು ಹರಿಜನನಾಗಿರುವುದು ಮುಕ್ತಾಯವಾಗುತ್ತದೆ. ಸರ್ವೋಚ್ಚ ನ್ಯಾಯಾಲಯವು, "ಒಮ್ಮೆ ಪರಿಶಿಷ್ಟ ಜಾತಿಯವನಾಗಿರುವಾಗ ಯಾವಾಗಲೂ ಪರಿಶಿಷ್ಟ ಜಾತಿಯವನೇ ಆಗಿರುತ್ತಾನೆ" ಎಂದು ಹೇಳಿದೆ. ಆದ್ದರಿಂದ ನಾನು ದೆಹಲಿಗೆ ಹೋಗುತ್ತಿದ್ದುದು ವ್ಯರ್ಥವಾದ ಕೆಲಸವಾಗಿರದಿದ್ದು, ನಾನು ನನ್ನ ಜನಸಮುದಾಯಕ್ಕೆ ಮಹತ್ತರ ಸೇವೆಯನ್ನು ಸಲ್ಲಿಸಿದ್ದೇನೆ. ಸಿಹಿ ಮಾತುಗಳು, ಜನ ಸಮುದಾಯವನ್ನು ಬಹುಕಾಲದವರೆಗೆ ಸಂತೋಷಪಡಿಸುವುದಿಲ್ಲ.

ಉಪನಿಷತ್ತು ಮುಂತಾದವುಗಳ ಸಂಕರ ಪದ್ಧತಿ ಅಡಿಯಲ್ಲಿ ಅಸ್ಪೃಶ್ಯತೆಯನ್ನು ಆಚರಿಸುತ್ತಿರುವುದರ ಬಗ್ಗೆ ಕೆಲವು ಸಂದರ್ಭಗಳನ್ನು ಚಿತ್ರೀಕರಿಸುವಂತೆ ಕೇಂದ್ರ ಗೃಹ ಇಲಾಖೆಯು ಈ ಸರ್ಕಾರಕ್ಕೆ ಪತ್ರವನ್ನು ಬರೆದಿರುತ್ತದೆ ಎಂಬುದಾಗಿ ನಿಮಗೆ ನಾನು ತಿಳಿಸಬಯಸುತ್ತೇನೆ. ಅಸ್ಪೃಶ್ಯತೆ ಎಂಬ ಪದವನ್ನು ಏಕೆ ಉಪಯೋಗಿಸುವಿರಿ. ನಮಗೆ ಸಂಬಂಧಪಡುವಷ್ಟರ ಮಟ್ಟಿಗೆ, ನಾವು ಅಸ್ಪೃಶ್ಯರೇನಲ್ಲ. ನಾವು ಹಿಂದುಗಳ ತೆಕ್ಕೆಯಿಂದ ಸದಾ ಹೊರಗೇ ಇದ್ದೇವೆ. ನಾವು ದ್ವೇಷದ ಬಲಿಪಶುಗಳಾಗಿದ್ದೇವೆ. ಹಿಂದುಗಳು ನಮ್ಮನ್ನು ಮುಟ್ಟಲು ಇಷ್ಟಪಡುತ್ತಿರಲಿಲ್ಲ. ನಾವು ಅವರ ಬಾವಿಗಳನ್ನು ಮುಟ್ಟುವಂತಿರಲಿಲ್ಲ, ಅವರ ಬೀದಿಗಳಲ್ಲಿ ಓಡಾಡುವಂತಿರಲಿಲ್ಲ. ನಾವು ಇದಕ್ಕೆ ಎಂದಿಗೂ ಸ್ವತಃ ರಾಜೀ ಮಾಡಿಕೊಳ್ಳಲೇ ಇಲ್ಲ. ನಾವು ಅಸಹಕಾರಿಗಳಾಗಿದ್ದೆವು, ಬಂಡಾಯಗಾರರಾಗಿದ್ದೆವು, ಆದರೆ ನಾವು ತುಳಿತಕ್ಕೊಳಗಾಗಿದ್ದೆವು, ದಮನಕ್ಕೊಳಗಾಗಿದ್ದೆವು. ಹೌದು, ತಾಂತ್ರಿಕ ಅರ್ಥದಲ್ಲಿ, 'ಅಸ್ಪೃಶ್ಯತೆ' ಎಂಬ ಪದವು ನಮಗೆ ಅನ್ವಯಿಸುತ್ತದೆ. ಅಸ್ಪೃಶ್ಯತೆಯನ್ನು ಸಂವಿಧಾನದ ಮೂಲಕ ಕೊನೆಗಾಣಿಸಲಾಗಿದೆ, ಆದರೆ ಅದು ಹೆಸರಿನಲ್ಲಿ ಮಾತ್ರ. ಜಿಲ್ಲೆಗಳಲ್ಲಿ, ಗ್ರಾಮಗಳಲ್ಲಿ ನಾವು ಇಂದಿಗೂ ಕೂಡ ಕೆಲವು ಹಾದಿಗಳಲ್ಲಿ ನಡೆದಾಡುವಂತಿಲ್ಲ, ಕೆಲವು ಬಾವಿಗಳನ್ನು ಉಪಯೋಗಿಸುವಂತಿಲ್ಲ. ರಾಚಯ್ಯನವರು

ಈ ಕಾರಣದಿಂದಾಗಿ ಈ ಹುದ್ದೆಯನ್ನು ಪಡೆದುಕೊಂಡಿದ್ದಾರೆ, ಇವರು ಇದನ್ನು ತಮ್ಮ ಅರ್ಹತೆಯಿಂದ ಅಥವಾ ಬಲದಿಂದ ಪಡೆದುಕೊಂಡಿದ್ದಾರೆ ಎಂಬುದಾಗಿ ಭಾವಿಸುತ್ತಾರೆಯೇ? ಅಧಿಕಾರದಲ್ಲಿರುವ ಪಕ್ಷವು ಕೆಲವು ಜನರನ್ನು ತಮ್ಮ ಕಡೆ ಎಳೆದುಕೊಂಡು ಅವರನ್ನು ನಮ್ಮ ಜನರ ಪ್ರತಿನಿಧಿಯನ್ನಾಗಿ ಪಟ್ಟಕಟ್ಟಿದ್ದಾರೆ. ಈ ದುರಂತವನ್ನು ನೋಡಿ, ನಾವು ನಮ್ಮ ಸ್ವಂತ ನಾಯಕನನ್ನು ಸಹ ಆಯ್ಕೆ ಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ.

**ಶ್ರೀ ಎನ್. ರಾಚಯ್ಯ:–** 'ನಮ್ಮ ಜನ' ಎಂದರೆ ಏನರ್ಥ, ನಾವು ಪ್ರಜಾಪ್ರಭುತ್ವದ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಜನತೆಯು ತಮ್ಮ ಪ್ರತಿನಿಧಿಗಳನ್ನು ಆಯ್ಕೆ ಮಾಡುತ್ತಾರೆ. ಪ್ರತ್ಯೇಕ ಮತದಾರರ ಸಮುದಾಯವನ್ನು ರದ್ದುಪಡಿಸಲಾಗಿದೆ.

**ಶ್ರೀ ಬಿ. ಶ್ಯಾಮಸುಂದರ್:–** ನಾನು ಎಲ್ಲ ವ್ಯವಸ್ಥೆಗಳನ್ನು ಅಧ್ಯಯನ ಮಾಡಿದ್ದೇನೆ ಹಾಗೂ ನಮ್ಮ ದೇಶದಲ್ಲಿ ಪ್ರಜಾಪ್ರಭುತ್ವವು ಹೇಗೆ ಕೆಲಸ ಮಾಡುತ್ತಿದೆ ಎಂಬುದರ ಬಗ್ಗೆಯೂ ನನಗೆ ಅರಿವಿದೆ. ಮಂತ್ರಿಗಳು ಕೊಂಚ ಉದ್ವೇಗಕ್ಕೆ ಒಳಗಾಗಿದ್ದು, ಇದರಿಂದ ತಪ್ಪಿಸಿಕೊಳ್ಳುವುದು ಅವರಿಗೆ ಕಷ್ಟವಾಗುತ್ತಿದೆ ಎಂಬುದಾಗಿ ನನಗೆ ಅನಿಸುತ್ತದೆ. ಸರ್ಕಾರವನ್ನು ಹಾಗೂ ಸಮುದಾಯವನ್ನೂ ತೃಪ್ತಿಪಡಿಸುವುದು ನಿಮಗೆ ಬೇಕಾಗಿದೆ. ಇದು ಕಷ್ಟಕರವಾದದ್ದು. ನೀವು ಒಂದು ಕಡೆ ಸ್ಥಿರವಾಗಿರಬೇಕು. ನಾನು ಕನ್ನಡದ ಕವಿಯಲ್ಲದಿದ್ದರೂ ಒಂದು ಕನ್ನಡ ಪದ್ಯವನ್ನು ಹೇಳುತ್ತೇನೆ.

ನನಗೆ ಇಬ್ಬರ ಮೇಲೆ ಪ್ರೀತಿ ಇದೆಯಪ್ಪಾ

ಸಾಹುಕಾರ ಚನ್ನಯ್ಯ ಮತ್ತು ನಿಜಲಿಂಗಪ್ಪ.

ಆದ್ದರಿಂದ, ಮಂತ್ರಿಗಳು ಎರಡು ವಿರೋಧ ಕಾರಣಗಳನ್ನು ಬೆಂಬಲಿಸುವಂತಿಲ್ಲ. ನಾನು ಒಬ್ಬ ವ್ಯಕ್ತಿಯೊಂದಿಗೆ ಸಂಪರ್ಕ ಹೊಂದಿದ್ದರೆ, ನಾನು ಆತನನ್ನು ಸಮರ್ಥಿಸಿಕೊಳ್ಳಬೇಕು ಅಥವಾ ಅವನಿಂದ ಬೇರ್ಪಡಬೇಕು. ನಾವು ಪ್ರತಿಯೊಬ್ಬರನ್ನೂ ತೃಪ್ತಿಪಡಿಸಲಾಗುವುದಿಲ್ಲ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:–** ಇವರು ಅಷ್ಟೊಂದು ಅಂಜುಬುರುಕರೇ?

**ಶ್ರೀ ಬಿ. ಶ್ಯಾಮಸುಂದರ್:–** ನಾನು ಅವರ ಮಾನಸಿಕ ಸ್ವಭಾವದ ಬಗ್ಗೆ ಮಾತನಾಡುತ್ತಿದ್ದೇನೆ. ನನ್ನ ಸ್ನೇಹಿತರಾದ ಶ್ರೀ ಚನ್ನಿಗರಾಮಯ್ಯನವರು ವಸತಿ ಯೋಜನೆಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ. ಕೇಂದ್ರ ಸರ್ಕಾರವು ಅನುದಾನಗಳನ್ನು ನೀಡುತ್ತಿದೆ. ಲಕ್ಷಾಂತರ ರೂಪಾಯಿಗಳವರೆಗೆ ಸಾಲಗಳನ್ನು ನೀಡಲಾಗುತ್ತಿದೆ. ಕಳೆದ ವರ್ಷ ಸ್ವಲ್ಪ ಮೊತ್ತವನ್ನು ಹಂಚಿಕೆ ಮಾಡಲಾಗಿತ್ತು. ಈ ವರ್ಷ ಇದನ್ನು ಕಡಿಮೆ ಮಾಡಲಾಗಿದೆ.

**ಶ್ರೀ ಎನ್. ರಾಚಯ್ಯ:–** ಎರಡನೇ ಯೋಜನೆಯಲ್ಲಿ ಈ ಹಂಚಿಕೆಯು 2 ಕೋಟಿ 96 ಲಕ್ಷ ರೂ.ಗಳಷ್ಟಾಗಿತ್ತು. ಈಗ ನಮಗೆ 440 ಲಕ್ಷ ರೂ.ಗಳನ್ನು ಒದಗಿಸಲಾಗಿದೆ.

**ಶ್ರೀ ಬಿ. ಶ್ಯಾಮಸುಂದರ್:–** 1961–62ನೇ ಸಾಲಿಗೆ ಬಜೆಟ್ ಮೊತ್ತ ಎಷ್ಟು?

**ಶ್ರೀ ಎನ್. ರಾಚಯ್ಯ:–** ಎಲ್ಲ ಕಡೆಯೂ ಸಾಮಾನ್ಯವಾಗಿ ಕಡಿಮೆಯಾಗಿದೆ. ಇಲ್ಲಿಯೂ ಸಹ ಕಡಿಮೆ ಮಾಡಲಾಗಿದೆ. ನಾವು ಇದನ್ನು ಹೆಚ್ಚಿಸಲಿದ್ದೇವೆ.

**ಶ್ರೀ ಬಿ. ಶ್ಯಾಮಸುಂದರ್:–** ಕಳೆದ ವರ್ಷ ಇದು 69 ಲಕ್ಷ ರೂ.ಗಳಾಗಿತ್ತು. ಈಗ, ಇದು 7 ಲಕ್ಷ ರೂ.ಗಳು ಅಥವಾ 4 ಲಕ್ಷ ರೂ.ಗಳಾಗಿರುತ್ತದೆ.

**ಶ್ರೀ ಕೆ.ಪಿ. ರೇವಣಸಿದ್ಧಪ್ಪ:–** ಸ್ವಾಮಿ, ಇಲ್ಲಿ ಸಾಹುಕಾರ್ ಚನ್ನಯ್ಯನವರ ಬಗ್ಗೆ ಪ್ರಸ್ತಾಪ ಮಾಡಿ ಈ ರೀತಿ ಅವರ ಬಗ್ಗೆ ಹೇಳಬಹುದೇ?

**ಶ್ರೀ ಬಿ. ಶ್ಯಾಮಸುಂದರ್:–** ನಾನು ಸಾಹುಕಾರ ಚನ್ನಯ್ಯನವರ ಬಗ್ಗೆ ಪ್ರಸ್ತಾಪಿಸುತ್ತಿಲ್ಲ. ನನ್ನ ಪ್ರಸ್ತಾಪವು ಏನಿದ್ದರೂ ಕವಿ ಚನ್ನಯ್ಯನವರ ಬಗ್ಗೆ ಆಗಿತ್ತು.

ಆದ್ದರಿಂದ, ವಸತಿ ನಿರ್ಮಾಣದಡಿಯ ಅನುದಾನವನ್ನು ಹೆಚ್ಚಿಸಬೇಕು ಹಾಗೂ ಉದಾರವಾದ ಅನುದಾನಗಳನ್ನು ಕೊಡಬೇಕು. "ಅಸ್ಪೃಶ್ಯರು" ಎಂಬುದಾಗಿ ಕರೆಯಲಾಗುತ್ತಿರುವ ನನ್ನ ಸಮುದಾಯ ಅಥವಾ ನಮ್ಮ ಸಮುದಾಯ ಅಥವಾ ಜನರು ಬಿಲಗಳಲ್ಲಿರುವ ಇಲಿಗಳಂತೆ ವಾಸಿಸುತ್ತಿದ್ದಾರೆ. ಈಗ ಕಟ್ಟಡಗಳ ಅನುದಾನಗಳಿಗೆ ಸಂಬಂಧಪಡುವಷ್ಟರಮಟ್ಟಿಗೆ ಇಡೀ ರಾಜ್ಯಕ್ಕೆ ಏಕರೂಪದ ಕಾರ್ಯನೀತಿ ಇರಬೇಕಾಗಿದೆ. ಕಳೆದ ಮೂರು ವರ್ಷಗಳಿಂದ ನಾನು ಆಂಧ್ರಪ್ರದೇಶ ಸರ್ಕಾರವು ಇತ್ತೀಚೆಗೆ ನೀಡಿದಂಥ ರೀತಿಯಲ್ಲೇ ಕೆಲವು ರಿಯಾಯಿತಿಗಳನ್ನು ತೋರಿಸಬೇಕೆಂದು ಈ ಸರ್ಕಾರವನ್ನು ಒತ್ತಾಯಿಸುತ್ತಿದ್ದೇನೆ. ನಾವು ಅದೇ ಉತ್ತರವನ್ನು ಅಂದರೆ ವಿಷಯವನ್ನು ಪರಿಶೀಲಿಸಲಾಗುತ್ತದೆ ಎಂಬ ಉತ್ತರವನ್ನು ಕೇಳುತ್ತಿದ್ದೇವೆ. ನೆನ್ನೆ ಕೂಡ ನೀವು, ಒಂದು ವಿಷಯಕ್ಕೆ ಸಂಬಂಧಿಸಿದಂತೆ ಅದೇ ರೀತಿಯ ಉತ್ತರ ಕೊಟ್ರಿ. ಆಡಳಿತದಲ್ಲಿ "ಪರಿಶೀಲಿಸಲಾಗುತ್ತಿದೆ" ಎಂಬ ಪದದ ಅರ್ಥ ಒಂದು ವಿಷಯದಿಂದ ನುಣಿಚಿಕೊಳ್ಳುವುದು ಮಾತ್ರವಲ್ಲ. ಒಂದು ಪಕ್ಷ ನಿಮಗೆ ನಿರ್ದಿಷ್ಟ ಕೆಲಸವನ್ನು ಮಾಡಲಿಕ್ಕೆ ಇಷ್ಟವಿರದಿದ್ದರೆ, ನೀವು ಸರ್ಕಾರ ವಿಷಯವನ್ನು ಪರಿಶೀಲಿಸುವುದು. ಅಗತ್ಯವಿದ್ದರೆ, ಒಂದು ಸಮಿತಿಯನ್ನು ನೇಮಿಸಲಾಗುವುದು; ಸಮಿತಿಯಿಂದ ವರದಿ ಬಂದ ನಂತರ ವಿಷಯವನ್ನು ಪರಿಶೀಲಿಸಲಾಗುವುದು; ಇತ್ಯಾದಿ, ಇತ್ಯಾದಿಯಾಗಿ ಹೇಳುತ್ತೀರಿ. ಇದರ ಅರ್ಥ ನಿಮಗೆ ಯಾವುದನ್ನೂ ಮಾಡುವ ಇಷ್ಟವಿಲ್ಲವೆಂಬುದನ್ನು ತೋರಿಸುತ್ತದೆ.

**ಶ್ರೀ ಸಿ.ಎಂ. ಆರುಮುಗಂ:–** ತರುವಾಯ, ಸಮಿತಿಗಳ ವರದಿಯು ಮುದ್ರಿತವಾಗಿದ್ದರೂ ಸಹ, ನೀವು ವರದಿಯ ವಾಸ್ತವಿಕ ಸಂಗತಿಗಳನ್ನು ಸಾರ್ವಜನಿಕ ಹಿತಾಸಕ್ತಿಯಿಂದ ಬಹಿರಂಗಗೊಳಿಸಲಿಕ್ಕಾಗುವುದಿಲ್ಲವೆಂದು ಹೇಳುತ್ತೀರಿ.

## ಪ್ರತಿ ಶಿರ್ಷಿಕೆಯಡಿ ಶೇ 18 ಅನುದಾನ ಮೀಸಲಿರಲಿ

**ಶ್ರೀ ಬಿ. ಶ್ಯಾಮಸುಂದರ್:–** ಹೌದು, ಸರ್ಕಾರ ಉತ್ತರಿಸುವುದೇ ಹಾಗೆ. ಈಗ, ಖಚಿತವಾಗಿ ನೀವು ಏನು ಮಾಡುತ್ತೀರಿ ಎಂಬುದನ್ನು ಸ್ಪಷ್ಟವಾಗಿ ಹೇಳಿ. ನೀವು ಹಾಗೆ ಹೇಳದೆ ಹೋದರೆ, ನಿಮ್ಮ ನಿಲುವಿನ ಬಗ್ಗೆ ನಿಮಗೇ ಖಚಿತತೆ ಇರುವುದಿಲ್ಲ. ನನಗೂ ಸಹ ಅಲ್ಪಸ್ವಲ್ಪ ಆಡಳಿತದ ಅನುಭವ ಇದೆ ಮತ್ತು ಅವರು ಮಾತನಾಡಿದಾಗ ಅವರ ಉದ್ದೇಶ ಏನು ಎಂಬುದು ನನಗೆ ಅರ್ಥವಾಗಿದೆ. ಇದೆಲ್ಲ ಸತ್ಯದ ವಿಡಂಬನೆಯಾಗಿದೆ.

ಒಂದು ನತದೃಷ್ಟ ಸಮುದಾಯವಿದೆ. ಅವರನ್ನು ಜಾಡಮಾಲಿಗಳೆಂದು ಕರೆಯಲಾಗುತ್ತದೆ. ಸುಮಾರು ಒಂದು ವರ್ಷದ ಹಿಂದೆ ಅತ್ಯಂತ ಕುಲೀನ ವರ್ಗಕ್ಕೆ ಸೇರಿದ ಲೋಕಸಭಾ ಸದಸ್ಯರಾದ ಪ್ರೊಫೆಸರ್ ಮಲ್ಕಾನಿಯವರ ನೇತೃತ್ವದ ಒಂದು ಸಮಿತಿಯು ಇಲ್ಲಿಗೆ ಬಂದಿತ್ತು. ನಾನು, ಶ್ರೀ ಎನ್. ರಾಚಯ್ಯ ಹಾಗೂ ಇತರ ಕೆಲವು ಸ್ನೇಹಿತರು ಆ ಸಮಿತಿಯನ್ನು ಭೇಟಿ ಮಾಡಿದ್ದೆವು. ಸದರಿ ಸಮಿತಿಯು ಕೇವಲ ಪಾಯಿಖಾನೆಯನ್ನು ಸಾಗಿಸಲು ಜಾಡಮಾಲಿಗಳು ಅಳವಡಿಸಿಕೊಂಡ ವಿಧಾನವನ್ನು ಕಂಡುಹಿಡಿಯುವ ಸಲುವಾಗಿ ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ಭೇಟಿ ನೀಡುವ ಮೂಲಕ ಕಳೆದ ಆರು ಅಥವಾ ಏಳು ವರ್ಷಗಳಿಂದ ಕೆಲಸ ನಿರ್ವಹಿಸುತ್ತಿದೆ ಎಂಬುದು ನನಗೆ ತಿಳಿದುಬಂದಿತು. ನೀವು ನೈರ್ಮಲ್ಯ ತಪಾಸಣಾಧಿಕಾರಿ ಅಥವಾ ಇಂಜಿನಿಯರ್ ಆಗಿದ್ರಾ ಹೇಗೆ ಎಂಬುದರ ಬಗ್ಗೆ ನಾನು ಅಧ್ಯಕ್ಷರನ್ನು ಕೇಳಿದೆ. ಸದರಿ ಸಮಿತಿಯು ವ್ಯಕ್ತಿಯನ್ನು ಯಾರೋ ಕೆಲವರು ಅಳವಡಿಸಿಕೊಂಡಿದ್ದಾರೆ ಎಂಬುದನ್ನು ನೋಡುವುದಕ್ಕೆ ಬದಲಾಗಿ ಪಾಯಿಖಾನೆಯನ್ನು ಸಾಗಿಸಲು ಬಳಸಿಕೊಂಡ ವಿಧಾನಗಳನ್ನು ಪತ್ತೆಹಚ್ಚುವಲ್ಲಿ ಆಸಕ್ತಿ ಹೊಂದಿದೆ. ಅದು ಕೆಲಸಗಳನ್ನು ಹೇಗೆ ಮಾಡಲಾಗುತ್ತಿದೆ ಎಂಬುದನ್ನು ತಿಳಿದುಕೊಳ್ಳುವುದಾಗಿದೆ. ಇಡೀ ರಾಜ್ಯದಲ್ಲಿ, ಈ ಸಮುದಾಯಕ್ಕೆ ಯಾವುದೇ ಗೃಹನಿರ್ಮಾಣ ಅನುದಾನಗಳನ್ನು ನೀಡಿರುವುದಿಲ್ಲ. ಕೊಳಚೆ ನಿರ್ಮೂಲನೆಯ ಸೋಗಿನಲ್ಲಿ, ಈ ಜನರನ್ನು ಗ್ರಾಮದಿಂದ ಗ್ರಾಮಕ್ಕೆ ಮತ್ತು ಒಂದು ಸ್ಥಳದಿಮದ ಮತ್ತೊಂದು ಸ್ಥಳಕ್ಕೆ ಹೊರದೂಡಲಾಗುತ್ತಿದೆ. ಒಂದು ನಗರ ಸುಧಾರಣೆಗೊಂಡಂತೆಲ್ಲಾ, ಈ ಜನರಿಗೆ ಊರು ಬಿಟ್ಟು ಬೇರೆ ಊರಿಗೆ ಹೋಗುವಂತೆ ಹೇಳಲಾಗಿದೆ. ಈ ಪ್ರಕ್ರಿಯೆಯು ಕಳೆದ ಅನೇಕ ವರ್ಷಗಳಿಂದ ನಡೆಯುತ್ತಿದೆ ಮತ್ತು ಅದು ಈಗಲೂ ಮುಂದುವರಿದಿದೆ. ಆ ಸಮುದಾಯದ ಯಾರೇ ವ್ಯಕ್ತಿಯು ಶ್ರೀ ಪಿ.ಪಿ. ದೀನದಯಾಳು ನಾಯ್ಡುರವರಿಗೆ ಒಂದು ನಿವೇಶನಕ್ಕಾಗಿ ಅರ್ಜಿಯನ್ನು ಹಾಕಿದರೆ, ಅದನ್ನು ನಾಶಪಡಿಸುತ್ತಾರೆಂಬುದು ನನಗೆ ಖಂಡಿತ ಗೊತ್ತಿದೆ. ಶ್ರೀ ಪಿ.ಪಿ. ದೀನದಯಾಳು ನಾಯ್ಡು ಅವರೊಬ್ಬರೇ ಹೀಗೆ ಮಾಡುತ್ತಾರೆಂದಲ್ಲ, ಬೇರೆಯವರು ಹೀಗೆ ಮಾಡುತ್ತಾರೆ. ನಾನು, ಈ ವಿಷಯವನ್ನು ಪರಿಶೀಲಿಸುವಂತೆ ಮತ್ತು ಆಂಧ್ರ ಸರ್ಕಾರವು ನಿರ್ಧರಿಸಿದಂತೆ, ಪ್ರತಿಯೊಂದು ಶೀರ್ಷಿಕೆಯಡಿ ಬಜೆಟ್ ಅನುದಾನದ ಶೇಕಡ 18ರಷ್ಟನ್ನು ವಸತಿ ನಿರ್ಮಾಣದ ಉದ್ದೇಶಕ್ಕಾಗಿ ಪರಿಶಿಷ್ಟ ಜಾತಿಯವರಿಗೆ ಮೀಸಲಿರಿಸುವಂತೆ ನೋಡಿಕೊಳ್ಳಲು ಮಾನ್ಯ ಸಮಾಜ ಕಲ್ಯಾಣ ಸಚಿವರನ್ನು

ಕೋರುತ್ತೇನೆ. ಈ ಬಜೆಟ್‌ಅನ್ನು ನಾನು ವಿವರವಾಗಿ ಪರಿಶೀಲಿಸಿದೆ. ಮುಂದುವರಿದ ಆರ್ಥಿಕ ವ್ಯವಸ್ಥೆಯಲ್ಲಿ, ಯಾರೊಬ್ಬರು ಇದನ್ನು ಒಂದು ಬಜೆಟ್ ಎಂದು ನೋಡುವುದಿಲ್ಲ.

**ಶ್ರೀ ಎನ್. ರಾಚಯ್ಯ**:- ಶೇಕಡ ಪ್ರಮಾಣವನ್ನು ನಿಗದಿಪಡಿಸಿಲ್ಲ, ಆದರೆ, ಸಾಕಷ್ಟು ನಿಧಿಗಳನ್ನು ನೀಡಲಾಗುವುದು.

**ಶ್ರೀ ಆರ್. ಚನ್ನಿಗರಾಮಯ್ಯ**:- ಉಲ್ಲೇಖಿಸಿರುವ ಶೇಕಡ 18ರಷ್ಟು ನಿಧಿಗಳು ಸರ್ಕಾರಿ ನೇಮಕಾತಿಗಳಿಗೆ ಸಂಬಂಧಿಸಿದವುಗಳಾಗಿವೆಯೇ ಹೊರತು ಅನುದಾನಗಳನ್ನು ನೀಡುವುದಕ್ಕಿಲ್ಲ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ**:- ಮಾನ್ಯರೇ, ಅವರು ತಮ್ಮ ರಕ್ಷಣೆಯ ನಂತರ ಪರಿಶೀಲಿಸುತ್ತಿದ್ದಾರೆ. ಅವರು ನಿಮ್ಮ ವಿಷಯವನ್ನೇ ಗಣನೆಗೆ ತೆಗೆದುಕೊಂಡಿಲ್ಲ ಎಂದರೆ ಇನ್ನು ಲಂಬಾಣಿಗಳು, ಭೋವಿಗಳ ಪಾಡೇನು? ಸ್ವಾಮಿ.

ಅಪರಾಹ್ನ **4-00** ಗಂಟೆ

**ಶ್ರೀ ಕೆ. ಕೆಂಚಪ್ಪ**:- ಕ್ರಿಯಾಲೋಪದ ಬಗ್ಗೆ ಮಾತನಾಡುತ್ತಾ, ಮಾನ್ಯರೇ, ಒಬ್ಬ ಸದಸ್ಯರು ಮಾತನಾಡುತ್ತಿರುವಾಗ ಇನ್ನೊಬ್ಬ ಮಾನ್ಯ ಸದಸ್ಯರು ಅಡ್ಡಪಡಿಸುತ್ತಾರೆ ಮತ್ತು ಮಾತನಾಡುತ್ತಿರುವಂತಹ ಮಾನ್ಯ ಸದಸ್ಯರು ಸದನದ ಸಾಕಷ್ಟು ಸಮಯವನ್ನು ತೆಗೆದುಕೊಂಡು ಅನಾವಶ್ಯಕವಾಗಿ ವಿಷಯವನ್ನು ಲಂಬಿಸುತ್ತಿದ್ದಾರೆ ಮತ್ತು ತತ್ಪರಿಣಾಮವಾಗಿ ಈ ಸದನದ ಸದಸ್ಯರು ತಮ್ಮ ಅಮೂಲ್ಯ ಸಮಯದಿಂದ ವಂಚಿತರಾಗಿದ್ದಾರೆ.

**ಮಾನ್ಯ ಉಪ ಸಭಾಪತಿಯವರು**:- ಕಿಂಚಿತ್ತೂ ಅಡೆತಡೆ ಇರಕೂಡದು ಎಂಬುದನ್ನು ನಾನು ಒಪ್ಪುತ್ತೇನೆ. ಮಾತನಾಡುತ್ತಿರುವಂತಹ ಮಾನ್ಯ ಸದಸ್ಯರು ಬೇರೆಯವರಿಗೆ ಮಣಿಯಬೇಕಾಗಿಲ್ಲವೆಂಬುದು ನನ್ನ ಭಾವನೆ. ಶ್ರೀ ಬಿ. ಶ್ಯಾಮಸುಂದರ್‌ರವರು ಈಗಾಗಲೇ ದೀರ್ಘ ಸಮಯವನ್ನು ತೆಗೆದುಕೊಂಡಿದ್ದಾರೆ. ಅವರು ದಯವಿಟ್ಟು ಮುಗಿಸಬಹುದು.

**ಶ್ರೀ ಬಿ. ಶ್ಯಾಮಸುಂದರ್**:- ಮಾನ್ಯರೇ, ಅಂತಿಮವಾಗಿ, ಸಮಾಜ ಕಲ್ಯಾಣ ಇಲಾಖೆ ಮಾತ್ರವಲ್ಲದೆ ಬಹುತೇಕ ಎಲ್ಲಾ ಇಲಾಖೆಗಳು ಮುಂದೆ ಬಂದು ಆಂಧ್ರ ಸರ್ಕಾರವು ಪರಿಶಿಷ್ಟ ಜಾತಿಯವರಿಗಾಗಿ ಮೀಸಲಿರಿಸಿರುವಂತಹ ರೀತಿಯಲ್ಲೇ ಪರಿಶಿಷ್ಟ ಜಾತಿಯ)ವರಿಗಾಗಿ ಸದರಿ ಶೇಕಡ ಪ್ರಮಾಣವನ್ನು ಮೀಸಲಿರಿಸಬೇಕೆಂದು ನಾನು ಬಯಸುತ್ತೇನೆ.

ಲೋಕಸೇವಾ ಆಯೋಗದಲ್ಲಿ ಪರಿಶಿಷ್ಟ ಜಾತಿಯವರ ಪ್ರಾತಿನಿಧ್ಯ ಕುರಿತಂತೆ ನಾನು ಪ್ರತಿ ಸಂದರ್ಭದಲ್ಲೂ ಅದನ್ನು ಉಲ್ಲೇಖಿಸುತ್ತಿದ್ದೇನೆ ಮತ್ತು ನನ್ನ ಸ್ನೇಹಿತರಾದ ಶ್ರೀ ರಾಚಯ್ಯನವರು ತಾವು ಸಾಧ್ಯವಿರುವ ಎಲ್ಲಾ ಕ್ರಮ ಕೈಗೊಳ್ಳುವುದಾಗಿ ಪ್ರತಿ ಸಂದರ್ಭದಲ್ಲೂ ವಚನ ನೀಡುತ್ತಿದ್ದಾರೆ.

**ಶ್ರೀ ಎನ್. ರಾಚಯ್ಯ**:- ನಾನು ಯಾವುದೇ ವಚನ ನೀಡಿಲ್ಲ.

**ಶ್ರೀ ಬಿ. ಶ್ಯಾಮಸುಂದರ್**:- ತಾವು ಆ ವಿಷಯವನ್ನು ಪರಿಶೀಲಿಸುವುದಾಗಿ ತಾವು ಹೇಳುತ್ತಿದ್ದಿರಿ. ನಿಮ್ಮ ವರ್ಗದವರ ಶಿಕ್ಷಣವು ಸರ್ಕಾರದ ಒಂದು ಆದೇಶದಿಂದಾಗಿ ಸಾಕಷ್ಟು ತೊಂದರೆ ಅನುಭವಿಸಿದೆ ಮತ್ತು ಆ ಆದೇಶದಲ್ಲಿ ಯಾವ ವಿದ್ಯಾರ್ಥಿಗಳ ತಂದೆ-ತಾಯಿಗಳು ವಾರ್ಷಿಕ 1,200/- ರೂ.ಗಳ ಆದಾಯವನ್ನು ಹೊಂದಿರುತ್ತಾರೋ ಅಂತಹ ವಿದ್ಯಾರ್ಥಿಗಳಿಗೆ ಫ್ರೀ-ಶಿಪ್‌ನ್ನು ನೀಡಬಾರದೆಂದು ಹೇಳಲಾಗಿದೆಯೆಂದು ತಿಳಿಸಲು ನನಗೆ ಅತ್ಯಂತ ವಿಷಾದವೆನಿಸುತ್ತದೆ. ಇದು ಅನೇಕ ತಿಂಗಳುಗಳವರೆಗೆ ಜಾರಿಯಲ್ಲಿದ್ದು, ಇದರಿಂದಾಗಿ ನೂರಾರು ವಿದ್ಯಾರ್ಥಿಗಳು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಅವರಿಗಾಗಿ ನೀವು ಏನು ಮಾಡಬೇಕೆಂದು ಯೋಜಿಸಿದ್ದೀರಿ?

**ಶ್ರೀ ಎನ್. ರಾಚಯ್ಯ**:- ಆ ಆದೇಶವನ್ನು ಹಿಂತೆಗೆದುಕೊಳ್ಳಲಾಗಿದೆ.

**ಶ್ರೀ ಬಿ. ಶ್ಯಾಮಸುಂದರ್**:- ಸದರಿ ಆದೇಶವನ್ನು ರದ್ದುಗೊಳಿಸಿರುವುದು ನನಗೂ ಗೊತ್ತು. ಆದರೆ ಈ ಎಲ್ಲಾ ದಿನಗಳಲ್ಲಿ ತೊಂದರೆ ಅನುಭವಿಸಿದ ವಿದ್ಯಾರ್ಥಿಗಳ ಬಗ್ಗೆ ಏನು ಹೇಳುತ್ತೀರಿ?

# ಸಮಾಜ ಕಲ್ಯಾಣ ಇಲಾಖೆ ಹೆಚ್ಚು ಸಾಮಾಜಿಕವಾಗಲಿ

ನನ್ನ ಸ್ನೇಹಿತರಾದ ಶ್ರೀ ಮಾಲಿ ಮರಿಯಪ್ಪನವರ ಇಲಾಖೆಯು ಬಹುಮಟ್ಟಿಗೆ ಪರಿಶಿಷ್ಟ ಜಾತಿಗಳ ಜನರಿಗೆ ಸಹಾಯವಾಗಬಹುದು. ಏನು ಮಾಡಲಾಗುತ್ತಿದೆ ಎಂಬುದನ್ನು ನಾನು ತಮ್ಮ ಗಮನಕ್ಕೆ ತರಬಯಸುತ್ತೇನೆ. ನನಗೆ ಅದರ ಬಗ್ಗೆ ಅನುಭವವಿದೆ. ರಾಜಕೀಯದಲ್ಲಿ ಆಸಕ್ತಿಯುಳ್ಳಂತಹ ಜನರು ಮತ್ತು ಅದರಲ್ಲೂ ನಿರ್ದಿಷ್ಟವಾಗಿ ಆಡಳಿತ ಪಕ್ಷಕ್ಕೆ ಸೇರಿರುವಂತಹ ಜನರು ಈ ಜನರನ್ನು ಶೋಷಿಸಲು ಮುಂದೆ ಬರುತ್ತಿದ್ದಾರೆ. ಅನೇಕ ವಿಚಾರಗಳನ್ನು ಇಲಾಖೆಯು ಗಮನಕ್ಕೆ ತರಲಾಗಿದೆ. ಉದಾಹರಣೆಗೆ, ನಿನ್ನೆ ನಾನು, ರಾಯಚೂರಿನಲ್ಲಿ ಪ್ರಾರಂಭಿಸಲಾದ ಸಹಕಾರ ಸಂಘವು ಲಕ್ಷಾಂತರ ರೂಪಾಯಿಗಳಷ್ಟು ನಷ್ಟವನ್ನು ಅನುಭವಿಸಿದೆ ಮತ್ತು ಅದು ಕಾಂಗ್ರೆಸ್ ಪಕ್ಷಕ್ಕೆ ಸೇರಿದವರೆಂಬ ಏಕೈಕ ಕಾರಣಕ್ಕಾಗಿ ವಿಷಯವನ್ನು ಇನ್ನೂ ವಿಚಾರಣೆಗೆ ಒಳಪಡಿಸಿರುವುದಿಲ್ಲವೆಂದು ಹೇಳಿ ರಾಯಚೂರಿನಿಂದ ಬಂದ ಒಂದು ರಿಜಿಸ್ಟರ್ಡ್ (ನೋಂದಾಯಿತ) ಪತ್ರವನ್ನು ಸ್ವೀಕರಿಸಿದೆ. ಗುಲ್ಬರ್ಗಾದಲ್ಲಿ, ನಾನು ಒಂದು ಗೃಹನಿರ್ಮಾಣ ಸಂಘವನ್ನು ಪ್ರಾರಂಭಿಸಲು ಪ್ರಯತ್ನಿಸಿದೆ. ನಾನು ಒಬ್ಬ ಸದಸ್ಯನಾಗಿ, ಅವರ ಪರವಾಗಿ ವಾದಿಸುತ್ತಿದ್ದೇನೆ ಅಷ್ಟೇ. ಈಗ ಅದನ್ನು ಪ್ರಾರಂಭಿಸಿ ಒಂದು ವರ್ಷಕ್ಕಿಂತ ಹೆಚ್ಚಾದರೂ ಅದನ್ನು ಇನ್ನೂ ನೋಂದಾಯಿಸಿರುವುದಿಲ್ಲ. ಸಂಘದ ಚಟುವಟಿಕೆಗಳು ಪುರಸಭೆಯ ವ್ಯಾಪ್ತಿಗೆ (ಪ್ರದೇಶಕ್ಕೆ) ಸೀಮಿತವಾಗಿರಬೇಕೆಂಬ ಸೂಚನೆಯನ್ನು ನೀಡಲಾಯಿತು. ಅದೂ ಅಲ್ಲದೆ ಈಗಲೂ ಈ ವಿಷಯದಲ್ಲಿ ಏನೂ ಮಾಡಲಿಕ್ಕಾಗಲ್ಲವೆಂದು ನಾನು ಭಾವಿಸಿದ್ದೇನೆ. ಭಾಲ್ಕಿಯಲ್ಲಿ ಸಹ ಕೆಲವು 15 ಅಥವಾ 20 ಜನರು ಪ್ರತಿಯೊಬ್ಬರೂ 100 ರೂಪಾಯಿ ಕೊಟ್ಟು ಷೇರುದಾರರಾದರು ಮತ್ತು ಅವರು ಒಂದು ವರ್ಷದ ಹಿಂದೆಯಷ್ಟೇ ಹಣವನ್ನು ಠೇವಣಿಯಾಗಿಟ್ಟಿದ್ದು, ಇನ್ನೂ ಕಾರ್ಯಗಳನ್ನು ಅಂತಿಮಗೊಳಿಸಲಾಗಿಲ್ಲ. ಕಾರ್ಯಗಳು ಇದೇ ರೀತಿ ಮುಂದುವರಿದರೆ, ಈ ಇಲಾಖೆಯೂ ಈ ಬಡ ಜನರಿಗೆ ಹೇಗೆ ಸಹಾಯವಾಗಬಲ್ಲದೆಂಬುದು ನನಗೆ ತಿಳಿಯುತ್ತಿಲ್ಲ. ಅಂತಿಮವಾಗಿ, ನಾನು ಸಮಾಜ ಕಲ್ಯಾಣ ಇಲಾಖೆಯು ಜನರಿಗೆ ಹೆಚ್ಚು ಸಾಮಾಜಿಕ ಮತ್ತು ಹೆಚ್ಚು ಸಹಾಯಕವಾಗಿರಬೇಕೆಂದು ಬಯಸುತ್ತೇನೆ.

# ಕಾರ್ಯಾಂಗದಿಂದ ನ್ಯಾಯಾಂಗ ಬೇರ್ಪಡಿಸುವಲ್ಲಿ ವಿಫಲರಾಗಿದ್ದೇವೆ

**ಶ್ರೀ ಬಿ. ಶ್ಯಾಮಸುಂದರ್ (ಭಾಲ್ಕಿ):-** ಮಾನ್ಯ ಅಧ್ಯಕ್ಷರೇ, ನಮ್ಮನ್ನು ನಾವೇ ಆಳಿಕೊಳ್ಳುತ್ತೇವೆಂದು ದೀಕ್ಷಾಬದ್ಧರಾಗಿರುವಂಥ ಈ ಪ್ರಜಾಪ್ರಭುತ್ವವೇ ಒಂದು ಸೋಜಿಗ. ನಾವು ಇಲ್ಲಿಂದ ಸ್ವಲ್ಪ, ಅಲ್ಲಿಂದ ಸ್ವಲ್ಪ ಮತ್ತು ಬೇರೆ ಯಾವುದೋ ಕಡೆಯಿಂದ ಸ್ವಲ್ಪ ವಿಚಾರಗಳನ್ನು ಆಯ್ದುಕೊಂಡು ನಾವು ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಪಾಲಿಸುತ್ತಿದ್ದೇವೆಂದು ಪ್ರಪಂಚಕ್ಕೆ ತೋರಿಸಲು ಬೇರೆ ಏನನ್ನೋ ಸೃಷ್ಟಿಸಿದ್ದೇವೆ. ಪ್ರಜಾಪ್ರಭುತ್ವದ ಈ ಯುಗದಲ್ಲಿ, ಬೇರೆ ದೇಶಗಳಲ್ಲಿ ಅವರು ಕಾರ್ಯಾಂಗದಿಂದ ನ್ಯಾಯಾಂಗವನ್ನು ಬೇರ್ಪಡಿಸಲು ಯೋಜಿತ ಮಾರ್ಗೋಪಾಯಗಳನ್ನು ಕಂಡುಕೊಂಡಿದ್ದಾರೆ. ಆದರೆ ಇಲ್ಲಿ, ಈವರೆಗೆ ನಾವು ಅಂಥ ಬೇರ್ಪಡಿಕೆಯನ್ನು ತರಲು ವಿಫಲರಾಗಿದ್ದೇವೆ.

## ಬೀದರ್ ಜಿಲ್ಲೆ ಮಾಂಜ್ರಾ ನದಿ ನೀರು ಬಳಕೆ

**ಶ್ರೀ ಬಿ. ಶ್ಯಾಮಸುಂದರ್ (ಭಾಲ್ಕಿ):–** ಮಾನ್ಯ ಅಧ್ಯಕ್ಷರೇ, ನಾನು ಪ್ರಸ್ತಾವವನ್ನು ಮಂಡಿಸಲು ಅನುಮತಿ ಕೋರುತ್ತೇನೆ:

"ಈ ವಿಧಾನ ಸಭೆಯು, ಬೀದರ್ ಜಿಲ್ಲೆಯ ಪಟ್ಟಣಗಳು ಮತ್ತು ನಗರಗಳಿಗೆ ಸಾಕಷ್ಟು ಪ್ರಮಾಣದಲ್ಲಿ ಕುಡಿಯುವ ನೀರು ಸರಬರಾಜು ಆಗುವಂತೆ ನೋಡಿಕೊಳ್ಳುವ ಸಲುವಾಗಿ ಮತ್ತು ಬೀದರಿನ ಮಣ್ಣು ಯಾವ ತೋಟಗಾರಿಕಾ ಬೆಳೆಗಳಿಗಾಗಿ ಇಡೀ ಭಾರತದಲ್ಲೇ ಪ್ರಸಿದ್ಧಿಯಾಗಿದೆಯೋ ಅಂತಹ ತೋಟಗಾರಿಕಾ ಬೆಳೆಗಳಿಗೆ ನೀರೊದಗಿಸುವ ಸಲುವಾಗಿ, ಸರ್ಕಾರವು ಉಭಯ ರಾಜ್ಯಗಳ ಜನರಿಗೆ ಅನುಕೂಲವಾಗುವ ರೀತಿಯಲ್ಲಿ ಮಾಂಜ್ರ ನದಿಯ ನೀರಿನ ಬಳಕೆಗಾಗಿ ಸಾಧ್ಯವಾದಷ್ಟು ಬೇಗನೆ ಆಂಧ್ರ ಪ್ರದೇಶ ಸರ್ಕಾರದೊಂದಿಗೆ ಸಮಾಲೋಚನೆ ನಡೆಸಬೇಕೆಂದು ಅಭಿಪ್ರಾಯಪಡುತ್ತದೆ."

**ಮಾನ್ಯ ಉಪಸಭಾಪತಿಗಳು:–** ಗೊತ್ತುವಳಿಯನ್ನು ಮಂಡಿಸಲಾಗಿದೆ.

"ಈ ವಿಧಾನ ಸಭೆಯು, ಬೀದರ್ ಜಿಲ್ಲೆಯ ಪಟ್ಟಣಗಳು ಮತ್ತು ಗ್ರಾಮಗಳಿಗೆ ಸಾಕಷ್ಟು ಪ್ರಮಾಣದಲ್ಲಿ ಕುಡಿಯುವ ನೀರು ಸರಬರಾಜು ಆಗುವಂತೆ ನೋಡಿಕೊಳ್ಳುವ ಸಲುವಾಗಿ ಮತ್ತು ಬೀದರಿನ ಮಣ್ಣು ಯಾವ ತೋಟಗಾರಿಕಾ ಬೆಳೆಗಳಿಗಾಗಿ ಇಡೀ ಭಾರತದಲ್ಲೇ ಪ್ರಸಿದ್ಧಿಯಾಗಿದೆಯೋ ಅಂತಹ ತೋಟಗಾರಿಕಾ ಬೆಳೆಗಳಿಗೆ ನೀರೊದಗಿಸುವ ಸಲುವಾಗಿ, ಸರ್ಕಾರವು ಉಭಯ ರಾಜ್ಯಗಳ ಜನರಿಗೆ ಅನುಕೂಲವಾಗುವ ರೀತಿಯಲ್ಲಿ ಮಾಂಜ್ರ ನದಿಯ ನೀರಿನ ಬಳಕೆಗಾಗಿ ಸಾಧ್ಯವಾದಷ್ಟು ಬೇಗನೆ ಆಂಧ್ರ ಪ್ರದೇಶ ಸರ್ಕಾರದೊಂದಿಗೆ ಸಮಾಲೋಚನೆ ನಡೆಸಬೇಕೆಂದು ಅಭಿಪ್ರಾಯಪಡುತ್ತದೆ."

**ಶ್ರೀ ಬಿ. ಶ್ಯಾಮಸುಂದರ್:–** ಇದು ಅತ್ಯಂತ ವಿವಾದಾತೀತವಾದ ಗೊತ್ತುವಳಿಯಾಗಿದ್ದು, ಇದರಿಂದ ನಮ್ಮ ರಾಜ್ಯಕ್ಕೆ ಅತ್ಯಂತ ಹೆಚ್ಚಿನ ಪ್ರಯೋಜನವಾಗುತ್ತದೆಂದು ನಾನು ಭಾವಿಸಿದ್ದೇನೆ. ನಮ್ಮ ರಾಜ್ಯದ ಅತ್ಯಂತ ಉತ್ತರದಲ್ಲಿರುವ ಬೀದರ್ ಈಗ ಒಂದು ಪಾಳುಬಿದ್ದ ಸ್ಥಳವಾಗಿದೆ. ನೀವು ಪ್ರಾಚೀನ ಕಾಲದಿಂದಲೂ ಈ ಸ್ಥಳದ ಇತಿಹಾಸವನ್ನು ಅವಲೋಕಿಸಿದಾಗ, ನಮ್ಮ ರಾಜ್ಯದ ಈ ಭಾಗವು ನಮ್ಮ ರಾಷ್ಟ್ರ ಭಾರತದುದ್ದಕ್ಕೂ ಮಾತ್ರವಲ್ಲದೆ ಪ್ರಪಂಚದಾದ್ಯಂತ ಹೆಸರುವಾಸಿಯಾಗಿತ್ತೆಂಬ ಈ ಎಲ್ಲಾ ವಿಚಾರಗಳನ್ನು ಈಗ ನಾನು ಹೇಳಬೇಕಾಗಿಲ್ಲ. ಕೆಲವು ಕವನಗಳಲ್ಲಿ ಬೀದರ್‌ನ ಹೆಸರು ಮುಸ್ಲಿಂ ದಾಳಿಕೋರರು ಭಾರತಕ್ಕೆ ಬರುವುದಕ್ಕೂ ಮುನ್ನವೇ ಉಲ್ಲೇಖಗೊಂಡಿತ್ತು ಎಂದು ಹೇಳಿರುವುದು ಎಷ್ಟರಮಟ್ಟಿಗೆ ಸತ್ಯವೆಂಬುದು ನನಗೆ ಗೊತ್ತಿಲ್ಲ.

**ವಿವಾದಗ್ರಸ್ತ ವಿಷಯ** – ಅವರು ನಳ–ದಮಯಂತಿ ಕಥೆಯು ಬೀದರ್‌ನಲ್ಲಿ ನಡೆಯಿತೆಂದು ಮತ್ತು ಸದರಿ ದಮಯಂತಿಯು ಬೀದರ್‌ಗೆ ಸೇರಿದವಳೆಂದು ಹೇಳುತ್ತಾರೆ. ಸಂಸ್ಕೃತದಲ್ಲಿ, ಕನ್ನಡದಲ್ಲಿ, ಮರಾಠಿಯಲ್ಲಿ, ಫ್ರೆಂಚ್‌ನಲ್ಲಿ ಬೀದರ್ ಕುರಿತು ಸಾಕಷ್ಟು ಕವನಗಳಿದ್ದು, ತೆಲುಗಿನಲ್ಲಿ ಮತ್ತು ಇಂಗ್ಲಿಷ್

ಹಾಗೂ ಅರೆಬಿಕ್ ಮತ್ತು ಪರ್ಷಿಯನ್ ಭಾಷೆಗಳಲ್ಲಿ ಸಹ ಬೀದರ್ ಬಗ್ಗೆ ಹಲವಾರು ಕವನಗಳಿವೆ ಎಂಬುದನ್ನು ಕೇಳಿ ನಿಮಗೆ ಅಚ್ಚರಿಯಾಗುತ್ತದೆ. ಈ ಎಲ್ಲಾ ಕವನಗಳಲ್ಲಿ, ನೀವು ಅದ್ಭುತವಾದ ರೀತಿಯಲ್ಲಿ ವರ್ಣಿಸಲಾದ ಮತ್ತು ವಿವರಿಸಲಾದ ಬೀದರ್‌ನ ವೈಭವವನ್ನು ನೋಡುವಿರಿ. ಈ ಕವನಗಳಲ್ಲಿ ಈ ಸ್ಥಳದ ಹೂಗಳು, ಹಣ್ಣುಗಳು ಮತ್ತು ಉದ್ಯಾನಗಳ ಬಗ್ಗೆ ಉಲ್ಲೇಖಿಸಲಾಗಿದೆ. ಹೂಗಳು ಮತ್ತು ಹಣ್ಣುಗಳಿಂದ ತುಂಬಿದ್ದಂತಹ ಈ ಉದ್ಯಾನವನಗಳು ಏನಾದವು ಎಂಬುದು ಯಾರಿಗೂ ಗೊತ್ತಿಲ್ಲ!

ನನ್ನ ಪ್ರಾಧ್ಯಾಪಕರಲ್ಲೊಬ್ಬರಾದ ಶ್ರೀ ಇ.ಇ. ಸ್ಪಾಟೇ ಎಂಬುವವರು ಜಪಾನಿನಿಂದ ಭಾರತಕ್ಕೆ ಬಂದಾಗ, ಅವರು ಬೀದರ್‌ನ ವೈಭವವನ್ನು ಬಣ್ಣಿಸುವ ಒಂದು ಅತ್ಯುತ್ತಮ ಕವನವನ್ನು ಬರೆದರು. ಅದರಲ್ಲಿ ಅವರು ಈ ಎಲ್ಲವನ್ನೂ ಉಲ್ಲೇಖಿಸಿರುತ್ತಾರೆ. ಅರೆಬಿಕ್‌ನ ಒಬ್ಬ ಪ್ರಾಧ್ಯಾಪಕರು ಸಹ ತಮ್ಮ ಬರಹಗಳಲ್ಲಿ ಬೀದರ್‌ನ ವೈಭವದ ಬಗೆ ಬಣ್ಣಿಸಿದ್ದಾರೆ. ಅನೇಕ ಇತಿಹಾಸಕಾರರು ಮತ್ತು ಕವಿಗಳು ಇದೇ ರೀತಿ ಬಣ್ಣಿಸಿದ್ದಾರೆ. ಆದರೆ, ಈ ಭೂ ಭಾಗವು ಹೈದರಾಬಾದ್ ರಾಜ್ಯದ ಅಧೀನಕ್ಕೆ ಬಂದಾಗ, ಈ ಯಾವುದೇ ಉದ್ಯಾನವನಗಳು ಮತ್ತು ಹೂಗಳು ನಿಮಗೆ ಕಾಣಲಿಕ್ಕಾಗದಿರುವುದು ಅತ್ಯಂತ ದುರಾದೃಷ್ಟಕರ ಸಂಗತಿ. ಮಾನ್ಯ ಅಧ್ಯಕ್ಷರೇ, ಆ ದಿನಗಳಲ್ಲಿ ಬೀದರ್ ಜಮೀನ್ದಾರರು ಮತ್ತು ಜಾಗೀರ್‌ದಾರರ ನಿಯಂತ್ರಣದಲ್ಲಿತ್ತೆಂಬುದು ತಮಗೆ ಗೊತ್ತು ಮತ್ತು ಜಾಗೀರುದಾರರು ಜನರಿಂದ ಸಾಧ್ಯವಾದಷ್ಟು ಹೆಚ್ಚು ಸುಲಿಗೆ ಮಾಡಲು ಪ್ರಯತ್ನಿಸುತ್ತಿದ್ದುದಲ್ಲದೆ ಯಾವುದನ್ನು ಹಿಂತಿರುಗಿಸಿ ಕೊಡುತ್ತಿರಲಿಲ್ಲವೆಂಬುದು ತಮಗೆ ಗೊತ್ತಿದೆ. ಈ ವ್ಯವಸ್ಥೆಯು ಅನೇಕ ವರ್ಷಗಳವರೆಗೆ ನಡೆದುಕೊಂಡು ಹೋಯಿತು.

ಮಹಾರಾಷ್ಟ್ರದ ತುಕಾರಾಂ ಬೀದರ್‌ನಲ್ಲಿ ಜನಿಸಿದರೆಂಬುದನ್ನು ಕೇಳಿ ತಮಗೆ ಅಚ್ಚರಿಯಾಗುತ್ತದೆ. ನಾಮದೇವ್ ಬೀದರ್‌ನಿಂದ ಬಂದವರೆಂದು ಹೇಳಲಾಗಿ, ತುಕಾರಾಂ ತಮ್ಮ ಅನೇಕ ಕವನಗಳಲ್ಲಿ ಈ ಸ್ಥಳದ ವೈಭವವನ್ನು ಕುರಿತು ವರ್ಣಿಸಿದ್ದಾರೆ. ನಾನು ಈ ಎಲ್ಲಾ ಕವನಗಳನ್ನು ಓದಿದ್ದೇನೆ. ಅವು ಮರಾಠಿ ಭಾಷೆಯಲ್ಲಿವೆ ಮತ್ತು ನಾನು ಇಲ್ಲಿ ಅವುಗಳನ್ನು ಉಲ್ಲೇಖಿಸಬಯಸುವುದಿಲ್ಲ. ಅಂಥ ಸ್ಥಳವು ಬಹುಮನಿ ಸಾಮ್ರಾಜ್ಯಕ್ಕೆ ಹಸ್ತಾಂತರಿಸಲ್ಪಟ್ಟು ಅವರು ಆ ಸ್ಥಳವನ್ನು ಆಕ್ರಮಿಸಿಕೊಂಡಾಗ, ಆ ಸಮಯದಲ್ಲೂ ಸಹ, ಇದು ಒಂದು ಒಳ್ಳೆಯ ಅಭಿವೃದ್ಧಿ ಹೊಂದುತ್ತಿದ್ದಂತಹ ರಾಜ್ಯವಾಗಿತ್ತು ಮತ್ತು ಭಾರತದ ಎಲ್ಲಾ ಭಾಗಗಳಿಂದ ಮತ್ತು ಪ್ರಪಂಚದಾದ್ಯಂತ ಜನರು ಇಲ್ಲಿಗೆ ಬರುವುದು ವಾಡಿಕೆಯಾಗಿತ್ತು. ಇದು ಮಹಮದ್ ದೀವಾ ಇಲ್ಲಿಗೆ ಬಂದಿದ್ದು, ಆತನನ್ನು ಸದರಿ ಸ್ಥಳದ ವಜೀರ್ ಅಥವಾ ದಿವಾನನನ್ನಾಗಿ ನೇಮಕ ಮಾಡಲಾಗಿತ್ತೆಂಬುದಾಗಿ ಸಹ ಹೇಳುತ್ತದೆ. ತಾಳಿಕೋಟೆ ಕದನದ ನಂತರ ಮುಸ್ಲಿಂ ರಾಜ್ಯವು ನಾಲ್ಕು ಅಥವಾ ಐದು ರಾಜ್ಯಗಳಾಗಿ ವಿಭಜನೆಗೊಂಡಾಗ ಈ ಸ್ಥಳವು ವಿನಾಶಗೊಂಡಿತು. ಎಲ್ಲಾ ಮರಗಳು, ಹೂಗಳು ಮತ್ತು ಹಣ್ಣುಗಳು ಏನಾದವು ಎಂಬುದು ಯಾರಿಗೂ ಗೊತ್ತಿಲ್ಲ. ಅವೆಲ್ಲವೂ ಇದ್ದಕ್ಕಿದ್ದಂತೆ ಅದೃಶ್ಯವಾದವು! ಎಲ್ಲಾ ಹೂಗಳು ಕಣ್ಮರೆಯಾಗಿ ಇದು ಈಗ ಒಂದು ಮರುಭೂಮಿಯಂತಾಗಿದೆ. ಇದು ಬೀದರ್‌ನ ವೈಭವ. ನಾವು ಅನೇಕ ಬಾವಿಗಳು,

ಉದ್ಯಾನಗಳು, ಮರಗಳು, ಹೂಗಳು ಮತ್ತು ಹಣ್ಣುಗಳನ್ನು ಹೊಂದಿದ್ದೆವು. ಹಣ್ಣುಗಳನ್ನು ಉತ್ತರ ಭಾರತಕ್ಕೆ ಮಾತ್ರವಲ್ಲದೆ ಪರ್ಷಿಯಾ ಮತ್ತು ಟರ್ಕಿ ದೇಶಗಳಿಗೆ ಕೂಡ ರಫ್ತು ಮಾಡುವ ರೂಢಿಯಿತ್ತು. ಬೀದರ್‌ನ ಮಾವಿನ ಹಣ್ಣುಗಳು ವಿಶ್ವದಾದ್ಯಂತ ಪ್ರಸಿದ್ಧವಾಗಿವೆ. ಅಂಥ ಒಂದು ಸ್ಥಳದಲ್ಲಿ ಕೆಲವೇ ಕೆಲವು ಉದ್ಯಾನಗಳು ಈಗ ಉಳಿದುಕೊಂಡಿವೆ ಮತ್ತು ಭವಿಷ್ಯದಲ್ಲಿ ಏನಾಗುತ್ತದೆ ಎಂದು ಯಾರಿಗೂ ಗೊತ್ತಿಲ್ಲ.

ಶ್ರೇಷ್ಠ ಭೂಗೋಳ ಶಾಸ್ತ್ರಜ್ಞರು ಮತ್ತು ಭೂಗರ್ಭ ಶಾಸ್ತ್ರಜ್ಞರು, ಭಾರತದಲ್ಲಿನ ಕೆಲವು ಮರುಭೂಮಿಗಳು ಮಾನವ ನಿರ್ಮಿತ ಮರುಭೂಮಿಗಳೆಂದು ಹೇಳಿದ್ದಾರೆ. ನೀವು ಎಲ್ಲಾ ಮರಗಳನ್ನು ಕತ್ತರಿಸಿದ್ದೀರಿ, ಮರಗಳು ಇಲ್ಲದಿದ್ದಲ್ಲಿ ಮಳೆಯೂ ಇಲ್ಲ ಮತ್ತು ನಿಮಗೆ ನೀರಿನ ಅಭಾವ ಉಂಟಾಗುತ್ತದೆ, ನಿಮ್ಮ ಸುಂದರವಾದ ಉದ್ಯಾನವನಗಳು ಮರುಭೂಮಿಯಾಗಿ ಪರಿವರ್ತನೆಯಾಗುತ್ತವೆ. ಈಗ ಬೀದರ್‌ನ ಸ್ಥಿತಿಯೂ ಇದೆ ಆಗಿದೆ. ನಾವು ಇದರ ಬಗ್ಗೆ ಯೋಚಿಸಬೇಕು.

ಬೀದರ್ ಜಿಲ್ಲೆಯ ಆರ್ಥಿಕ ಸಮೀಕ್ಷೆಗಾಗಿ ಇವರು ಮತ್ತು ಉಸ್ಮಾನಿಯಾ ವಿಶ್ವವಿದ್ಯಾಲಯದ ಪದವೀಧರರ ಸಂಘವನ್ನು ಒಳಗೊಂಡ ಸಮಿತಿಯನ್ನು ರಚಿಸಲಾಯಿತು. ಮತ್ತು ಆ ದಿನಗಳಲ್ಲಿನ ನಾವು ನಿಜಾಮರ ಸರ್ಕಾರಕ್ಕೆ ಒಂದು ಪತ್ರವನ್ನು ಸಲ್ಲಿಸಿದ್ದೆವು. ಆ ಸರ್ಕಾರವು ಈ ಎಲ್ಲಾ ವಿಚಾರಗಳಿಗೆ ಸಂಬಂಧಿಸಿದಂತೆ ಒಂದು ಸಮಿತಿಯನ್ನು ರಚಿಸಿತು. ಅದೃಷ್ಟವಶಾತ್, ಈ ಪ್ರದೇಶದ ಮತ್ತು ಮಾಂಜ್ರ ಯೋಜನೆಯ ಕಾರ್ಯಸಾಧ್ಯತೆಗಳ ಪೂರ್ಣ ಸಮೀಕ್ಷೆಯನ್ನು ನಡೆಸುವುದಕ್ಕೆ ಆಗಿನ ಮುಖ್ಯ ಇಂಜಿನಿಯರ್ ಆಗಿದ್ದ ಶ್ರೀ ಮೊಹಮದ್ ಯೂನಸ್ ಎಂಬ ಒಬ್ಬ ಉತ್ತಮ ಇಂಜಿನಿಯರ್‌ನನ್ನು ನೇಮಿಸಲಾಯಿತು. ಈ ಸಮೀಕ್ಷೆಯಲ್ಲಿ ಮಾಂಜ್ರ ಯೋಜನೆಯು ಇಡೀ ಪ್ರದೇಶಕ್ಕೆ ತುಂಬಾ ಉಪಯುಕ್ತವಾಗುತ್ತದೆ ಎಂಬುದನ್ನು ಮನವರಿಕೆ ಮಾಡಿಕೊಟ್ಟಿದೆ.

ಮಾಂಜ್ರ ನದಿಯು ಆಂಧ್ರ ಮತ್ತು ಮೈಸೂರಿನ ಗಡಿಯ ಮೂಲಕ ಹರಿಯುತ್ತದೆ. ಈ ನದಿಯ ನೀರನ್ನು ಬಳಸಿಕೊಂಡಲ್ಲಿ ಆಂಧ್ರ ಮತ್ತು ಮೈಸೂರುಗಳೆರಡು ಪ್ರಯೋಜನ ಪಡೆದುಕೊಳ್ಳುತ್ತವೆ. ಎಲ್ಲಾ ಅಂಕಿ–ಅಂಶಗಳು ನಿಮ್ಮ ವಶದಲ್ಲಿವೆ. ಈ ನಿರ್ಣಯವನ್ನು ತಯಾರಿಸುವುದಕ್ಕೆ ಮತ್ತು ಇದನ್ನು ಕಚೇರಿಗೆ ಕಳುಹಿಸುವುದಕ್ಕೆ ಮೊದಲು ನಾನು ಆಂಧ್ರದಲ್ಲಿ ಅಧಿಕಾರಿಗಳನ್ನು ಭೇಟಿ ಮಾಡಿದ್ದೆ. ಅವರಲ್ಲಿ ಅನೇಕರು ನನ್ನ ಗೆಳೆಯರೇ ಆಗಿದ್ದಾರೆ. ನಂತರ ಈ ಸಮೀಕ್ಷೆಯನ್ನು ನಡೆಸಿದ ಮತ್ತು ಎಲ್ಲಾ ಅಂಕಿ–ಅಂಶಗಳನ್ನು ಸಂಗ್ರಹಿಸಿದ ಅಂದಿನ ಮುಖ್ಯ ಇಂಜಿನಿರ್‌ರವರನ್ನು ಭೇಟಿ ಮಾಡಿದ್ದೆ. ನೀವು ಇಚ್ಛಿಸಿದಲ್ಲಿ, ನಿಮಗೆ ಎಲ್ಲಾ ವಿಷಯವನ್ನು ನಾನು ತಿಳಿಸುತ್ತೇನೆ. ನಿಮ್ಮಲ್ಲಿ ಕಡತಗಳು ಇವೆಯೆಂದು ಭಾವಿಸುತ್ತೇನೆ. ಆ ಮುಖ್ಯ ಇಂಜಿನಿರ್‌ರವರು ಈಗ ನಿವೃತ್ತಿ ಹೊಂದಿದ್ದಾರೆ. ಇವರು ನನ್ನ ಆಪ್ತ ಸ್ನೇಹಿತರು. ನಾವು ಯಾವುದೇ ವೆಚ್ಚವಿಲ್ಲದೆ ಇವರ ಅನುಭವದ ಪ್ರಯೋಜನವನ್ನು ಮತ್ತು ಸೇವೆಯನ್ನು ಪಡೆಯಬಹುದು. ಇವರನ್ನು ಸಲಹೆ ನೀಡುವುದಕ್ಕೆ ನಾವು ಆಹ್ವಾನಿಸೋಣ. ರಾಜ್ಯದ ನಮ್ಮ ಈ ಭಾಗವನ್ನು ಮತ್ತೊಮ್ಮೆ ಉದ್ಯಾನವನದ ಭೂಮಿಯಾಗಿ ಈ ಯೋಜನೆಯು ಪರಿವರ್ತಿಸುವುದು. ಇದು ವಿವಾದಗ್ರಸ್ಥವಾಗಿರದಿರುವುದರಿಂದ ಈ ವಿಷಯವನ್ನು ವಿವರವಾಗಿ ಲಂಬಿಸುವ ಅಗತ್ಯ ನನಗೆ ಇಲ್ಲ. ನಾವು ಹಲವಾರು ನೀರಾವರಿ ಯೋಜನೆಗಳನ್ನು

ಪಡೆದಿದ್ದೇವೆ. ಒಂದೆಡೆ ಶರಾವತಿ ಯೋಜನೆ, ಮತ್ತೊಂಡೆಡೆ ತುಂಗ-ಭದ್ರ ಯೋಜನೆ, ಆದರೆ ರಾಜ್ಯದ ನಮ್ಮ ಭಾಗ ಅಂದರೆ ಬೀದರ್ ನಿರ್ಲಕ್ಷಿತವಾಗಿದೆ. ಅದೃಷ್ಟವಶಾತ್ ಮುಖ್ಯ ಮಂತ್ರಿಗಳು ಮತ್ತು ಲೋಕೋಪಯೋಗಿ ಮಂತ್ರಿಗಳಿಬ್ಬರೂ ಇಲ್ಲಿದ್ದಾರೆ, ಅವರು ಈ ಎಲ್ಲಾ ಅಂಶಗಳನ್ನು ಪರಿಗಣನೆಗೆ ತೆಗೆದುಕೊಳ್ಳುತ್ತಾರೆಂದು ನಾನು ಭರವಸೆ ಇಡುತ್ತೇನೆ. ಕಡತಗಳು ನಿಮ್ಮೊಂದಿಗಿವೆ ಅವುಗಳನ್ನು ನೀವು ನೋಡಬಹುದು. ತಕ್ಷಣ ಕಾಮಗಾರಿ ಪ್ರಾರಂಭಿಸಬೇಕೆಂದು ನಾನು ಬಯಸುವುದಿಲ್ಲ. ನೀವು ಈ ಪ್ರದೇಶವನ್ನು ಪರೀಕ್ಷಿಸಿ, ಸಮೀಕ್ಷೆ ಮಾಡಿ ಮತ್ತು ಆಂಧ್ರದೊಡನೆ ಒಂದು ಒಪ್ಪಂದವನ್ನು ಮಾಡಿಕೊಳ್ಳಿ ಮತ್ತು ಈ ಯೋಜನೆಯನ್ನು ಮುಂದಿನ ಪಂಚವಾರ್ಷಿಕ ಯೋಜನೆಗೆ ನೀವು ಸೇರಿಸಿಕೊಳ್ಳಬಹುದು. ಇದರಿಂದ ಎಲ್ಲರಿಗೂ ಅನುಕೂಲವಾಗುತ್ತದೆ.

ನೀವು ಇದನ್ನು ವಿರೋಧಪಕ್ಷದ ಸದಸ್ಯನಿಂದ ಅಥವಾ ಸ್ವತಂತ್ರ ಅಭ್ಯರ್ಥಿಯಿಂದ ಅಥವಾ ಕಾಂಗ್ರೆಸ್ ಸದಸ್ಯನಿಂದ ಅಥವಾ ಕಾಂಗ್ರೆಸೇತರ ಸದಸ್ಯನಿಂದ ಬಂದ ನಿರ್ಣಯವೆಂದು ಪರಿಗಣಿಸಬಾರದು. ಇದು ಭಾರತದ ಒಬ್ಬ ನಾಗರಿಕನಿಂದ ಬಂದ ಮತ್ತು ಈ ರಾಜ್ಯಕ್ಕೆ ಸಂಬಂಧಪಟ್ಟ ನಿರ್ಣಯ. ನಾನು ಇದನ್ನು ಏಕೆ ಹೇಳುತ್ತಿರುವೆನೆಂದರೆ ನಾನು ಬೀದರ್‌ಗೆ ಕಳೆದ ಬಾರಿ ಹೋಗಿದ್ದಾಗ ನಾನು ನನ್ನ ಸಾಕಷ್ಟು ಗೆಳೆಯರನ್ನು ಭೇಟಿಯಾಗಿದ್ದೆ. ಆಗ ಅವರು ನೀರಿನ ಕೊರತೆಯ ಬಗ್ಗೆ ದೂರಿತ್ತರು ಮತ್ತು ಅವರ ಮರಗಳು ಒಣಗಿ ಹೋಗುತ್ತಿರುವ ಬಗ್ಗೆ ಮಾತನಾಡಿದರು.

ವಾಸ್ತವವಾಗಿ, ಬೀದರ್ ಪುರಸಭೆಯೂ ಇದರ ಜಾರಿಗೆ ಒಂದು ಠರಾವನ್ನು ಹೊರಡಿಸಿತು ಮತ್ತು ಲೋಕೋಪಯೋಗಿ ಇಲಾಖೆಯ ಮಂತ್ರಿಗಳಿಗೆ ಒಂದು ಮನವಿ ಪತ್ರವನ್ನು ಸಲ್ಲಿಸಿತು. ನಾನು ಪುರಸಭಾ ಸದಸ್ಯರೊಂದಿಗೆ ಮಾತನಾಡಿದಾಗ ಅವರೆಲ್ಲಾ ಈ ನಿರ್ಣಯವನ್ನು ಸದನದ ಮುಂದೆ ತರಬೇಕೆಂದು ಒತ್ತಾಯ ಮಾಡಿದರು. ಅವರೆಲ್ಲರ ಬಯಕೆ ಮತ್ತು ಇಚ್ಛೆಯ ಮೇರೆಗೆ ಈ ನಿರ್ಣಯವನ್ನು ಈ ವಿಧಾನ ಸಭೆಯ ಸದಸ್ಯನಾಗಿ ನಿಮ್ಮ ಗಮನಕ್ಕೆ ತಂದಿರುತ್ತೇನೆ. ಇದು ಆ ಪ್ರದೇಶದ ಜನರ ಅಪೇಕ್ಷೆ, ಬಯಕೆ ಮತ್ತು ಬೇಡಿಕೆಯಾಗಿರುತ್ತದೆ.

ಈ ಕೆಲವು ಮಾತುಗಳೊಂದಿಗೆ ಸರ್ಕಾರವು ನನ್ನ ಸಲಹೆಯನ್ನು ಪರಿಗಣಿಸಿ ಈ ನಿರ್ಣಯವನ್ನು ಅಂಗೀಕರಿಸುತ್ತದೆಂದು ನಂಬುತ್ತೇನೆ.

**ಶ್ರೀ ಎಸ್.ಡಿ. ಕೊತವಾಲೆ (ಚಿಕ್ಕೋಡಿ):-** ಮಾನ್ಯ ಸಭಾಧ್ಯಕ್ಷರೇ, ಪ್ರಾಯಶಃ ಇಂದು ಮುಂದೂಡುವ ಸಾಧ್ಯತೆಯಿರುವಂಥ ಪ್ರಸ್ತುತ ಅಧಿವೇಶನದ ಕೊನೆಯ ದಿನದಂದು ಕೆಲವು ಹೊಸ ಮತ್ತು ಉತ್ತಮ ಪ್ರವೃತ್ತಿಗಳು ಕಂಡುಬರುತ್ತಿವೆ. ಸನ್ಮಾನ್ಯ ಮುಖ್ಯ ಮಂತ್ರಿಗಳು ಗಮನಿಸಿರುವಂತೆ ಶ್ರೀ ಮುಕ್ತಣ್ಣಪ್ಪನವರಲ್ಲಿ ಒಂದು ಹೊಸ ಪ್ರವೃತ್ತಿ ಕಂಡುಬರುತ್ತಿದೆ. ಅಂತೆಯ ನನ್ನ ಗೆಳೆಯ ಶ್ರೀ ಶ್ಯಾಮಸುಂದರರವರಿಂದಲೂ ಸಹ ಉತ್ತಮ ಪ್ರವೃತ್ತಿ ಗೋಚರವಾಗುತ್ತಿದೆ. ಈ ನಿರ್ಣಯದ ಉದ್ದೇಶ ಅತ್ಯುತ್ತಮವಾದುದಾಗಿದೆ. ಕೃಷಿಯ ಅಭಿವೃದ್ಧಿ ಮತ್ತು ಇತರೆ ಮಾನವ ಅಗತ್ಯತೆಗಳನ್ನು ಈಡೇರಿಸುವುದಕ್ಕಾಗಿ ನೀರಿನ ಸಾಕಷ್ಟು ಬಳಕೆಯ ಬಗ್ಗೆ ಇದು ಉಲ್ಲೇಖಿಸುತ್ತದೆ. ನಿರ್ಣಯದಲ್ಲಿ ನಿರ್ದಿಷ್ಟಪಡಿಸಿದ ಮತ್ತೊಂದು ಉದ್ದೇಶವೆಂದರೆ ಅಂತರ-ರಾಜ್ಯ ನದಿಗಳ ನೀರಿನ ಬಳಕೆ. ಈ ಎರಡರ ಸಂಬಂಧದಲ್ಲೂ ಯಾವುದೇ ವಿವಾದಾಸ್ಪದಗಳಿಲ್ಲವೆಂದು ಭಾವಿಸುತ್ತೇನೆ.

## ವಿವಿದೋದ್ದೇಶ ಪ್ರೌಢಶಾಲೆ ಬಂದ್ ವಿದ್ಯಾರ್ಥಿಗಳಿಗೆ ತೊಂದರೆ

**ಶ್ರೀ ಬಿ. ಶ್ಯಾಮಸುಂದರ್ (ಭಾಲ್ಕಿ):–** ಈ ಮುಂದಿನವುಗಳನ್ನು ಸರ್ಕಾರ ದಯಮಾಡಿ ತಿಳಿಸುತ್ತದೆಯೋ?

ಎ) ವಿವಿದೋದ್ದೇಶ ಪ್ರೌಢಶಾಲೆ, ಬೀದರ್ ಇದು ಜನವರಿ 1961ರಿಂದ ಮುಚ್ಚಲ್ಪಟ್ಟಿದ್ದದ್ದು ವಾಸ್ತವವೇ? ಹಾಗಿದ್ದಲ್ಲಿ, ಮುಚ್ಚುವಿಕೆಗೆ ಕಾರಣ;

ಬಿ) ಮೇಲಿನ ಶಾಲೆಯು ಮುಚ್ಚುವಿಕೆಯಿಂದ ವಿದ್ಯಾರ್ಥಿಗಳು ತೊಂದರೆಗೆ ಸಿಲುಕಿದ್ದಾರೆಂಬುದು ವಾಸ್ತವ ಸಂಗತಿಯಲ್ಲವೆ?

**ಶ್ರೀ ಅಣ್ಣಾರಾವ್ ಗಣಮುಖಿ (ಶಿಕ್ಷಣ ಸಚಿವರು):–**

ಎ) ಸ್ಥಳೀಯ ಗಲಭೆಗಳ ಚಿನ್ಹೆಗಳನ್ನು ಜಿಲ್ಲಾಧಿಕಾರಿಗಳು ಗುರುತಿಸಿದುದರಿಂದ ಪ್ರಶ್ನಿತ ಶಾಲೆಯು 27ನೇ ಜನವರಿ 1961ರಿಂದ 5ನೇ ಮಾರ್ಚ್ 1961ರವರೆಗೆ ಮುಚ್ಚಲ್ಪಟ್ಟಿತ್ತು.

ಬಿ) ಸಾಮಾನ್ಯವಾಗಿ ಅಧ್ಯಯನದ ವಾರ್ಷಿಕ ಭಾಗಗಳನ್ನು ಜನವರಿ 1961ರ ಕೊನೆಗೆ ಬಹುತೇಕ ಅಂತಿಮಗೊಳಿಸಲಾಗಿರುತ್ತದೆ. ಆದಾಗ್ಯೂ, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗ ಇವರು ಶಾಲೆಯು ಪುನರಾರಂಭಗೊಂಡಾಗ ವಿದ್ಯಾರ್ಥಿಗಳಿಗೆ ವ್ಯಾಪಕ ಮಾರ್ಗದರ್ಶನ ನೀಡಲು ಮುಖ್ಯೋಪಾಧ್ಯಾಯರಿಗೆ ಸೂಚನೆಗಳನ್ನು ನೀಡಿದ್ದಾರೆ.

**ಶ್ರೀ ಬಿ. ಶ್ಯಾಮಸುಂದರ್:–** (ಬಿ)ಗೆ ಪೂರಕವಾಗಿ: ಮಾರ್ಚ್ ಕೊನೆಯವರೆಗೂ ಪಠ್ಯಕ್ರಮಗಳು ಪೂರ್ಣಗೊಂಡಿಲ್ಲವೆಂಬುದು ವಾಸ್ತವವೇ? ಎಂಬುದನ್ನು ನಾನು ತಿಳಿದುಕೊಳ್ಳಬಹುದೇ?

**ಶ್ರೀ ಅಣ್ಣಾರಾವ್ ಗಣಮುಖಿ:–** ಶಾಲೆಯು ಮುಚ್ಚುವಿಕೆಯಿಂದಾಗಿ ಜನವರಿ 1961ರ ಕೊನೆಯವರೆಗೆ ಪಠ್ಯಕ್ರಮಗಳನ್ನು ಪೂರ್ಣಗೊಳಿಸಿಲ್ಲವೆಂಬ ಉತ್ತರ ಸ್ಪಷ್ಟವಾಗಿದೆ ಮತ್ತು ವ್ಯಾಪಕ ಮಾರ್ಗದರ್ಶನವನ್ನು ಶಾಲೆಯ ಪುನರಾರಂಭದ ನಂತರ ವಿದ್ಯಾರ್ಥಿಗಳಿಗೆ ನೀಡಲಾಗಿದೆ.

**ಶ್ರೀ ಬಿ. ಶ್ಯಾಮಸುಂದರ್:–** ಮಾರ್ಚ್ ಕೊನೆಯವರೆಗೂ ಪಠ್ಯ ವಿಷಯವು ಪೂರ್ಣಗೊಂಡಿಲ್ಲ ವೆಂಬುದು ವಾಸ್ತವ ಸಂಗತಿಯೇ?

**ಶ್ರೀ ಅಣ್ಣಾರಾವ್ ಗಣಮುಖಿ:–** ಅದು ಸರಿಯಲ್ಲ. ಉತ್ತರವು ಸ್ಪಷ್ಟವಾಗಿದೆ.

**ಶ್ರೀ ಬಲ್ವಂತ್ ರಾವ್:–** ಫೆಬ್ರವರಿ ಮತ್ತು ಮಾರ್ಚ್ ತಿಂಗಳುಗಳಲ್ಲಿ ಆ ಸ್ಥಳದಲ್ಲಿ ಯಾವುದಾದರು ಘಟನೆಗಳು ನಡೆದಿವೆಯೇ?

**ಶ್ರೀ ಅಣ್ಣಾರಾವ್ ಗಣಮುಖಿ:–** 26ನೇ ಜನವರಿಯಂದು ನಡೆದುದನ್ನು ಹೊರತುಪಡಿಸಿದರೆ ನನಗೆ ಇನ್ನೇನೂ ತಿಳಿದಿಲ್ಲ.

**ಶ್ರೀ ಬಲ್ವಂತ್ ರಾವ್:–** ಫೆಬ್ರವರಿ ಮತ್ತು ಮಾರ್ಚ್ ತಿಂಗಳುಗಳಲ್ಲಿ ಶಾಲೆಯನ್ನು ಮುಚ್ಚಿಸುವಂತೆ ಆದೇಶಿಸಲು ಜಿಲ್ಲಾಧಿಕಾರಿಗಳು ಏನು ಕಾರಣಗಳನ್ನು ನೀಡಿದ್ದಾರೆ?

**ಶ್ರೀ ಅಣ್ಣಾರಾವ್ ಗಣಮುಖಿ:–** ನಮಗೆ ಬಂದಿರುವ ವರದಿಯಂತೆ ಜನವರಿ 26, 27 ಮತ್ತು 28ರಂದು ವಿದ್ಯಾರ್ಥಿಗಳಿಂದ ಕೆಲವು ಮೆರವಣಿಗೆಗಳು ನಡೆದವು. ಆದ್ದರಿಂದ ಜಿಲ್ಲಾಧಿಕಾರಿಗಳು ಶಾಲೆಯನ್ನು ಮುಚ್ಚುವುದು ಸೂಕ್ತವೆಂದು ಭಾವಿಸಿ ಶಾಲೆಯನ್ನು ಮುಚ್ಚಲು ಆದೇಶಿಸಿದರು.

**ಶ್ರೀ ಬಲ್ವಂತ್ ರಾವ್:–** ಇಡೀ ಫೆಬ್ರವರಿ ಮತ್ತು ಮಾರ್ಚ್ ತಿಂಗಳುಗಳಲ್ಲಿ ಶಾಲೆ ಮುಚ್ಚಿತ್ತು ಎಂಬುದು ವಾಸ್ತವ ಸಂಗತಿಯಲ್ಲವೇ?

**ಶ್ರೀ ಅಣ್ಣಾರಾವ್ ಗಣಮುಖಿ:–** ಇಡೀ ಫೆಬ್ರವರಿ ತಿಂಗಳಲ್ಲಿ ಇದು ಮುಚ್ಚಲ್ಪಟ್ಟಿತ್ತು.

**ಶ್ರೀ ಬಲ್ವಂತ್ ರಾವ್:–** ಜಿಲ್ಲಾಧಿಕಾರಿಗಳು, ವಿದ್ಯಾರ್ಥಿಗಳ ಪರವಾಗಿ ಕ್ಷಮೆಯನ್ನು ಬಯಸಿದ್ದರು ಮತ್ತು ಆ ಕ್ಷಮೆ ಯಾಚಿಸಲು ಬಲವಂತ ಪಡಿಸುತ್ತಿದ್ದರೆಂಬುದು ವಾಸ್ತವ ಸಂಗತಿಯಲ್ಲವೆ. ಆದರೆ, ವಿದ್ಯಾರ್ಥಿಗಳು ಯಾವುದೇ ಕ್ಷಮೆಯನ್ನು ಕೇಳಲು ಸಿದ್ಧರಿರಲಿಲ್ಲ. ಇದೊಂದೆ ಕಾರಣದಿಂದ ಶಾಲೆಯು ಮುಚ್ಚಲ್ಪಟ್ಟಿತ್ತಲ್ಲವೆ?

**ಶ್ರೀ ಅಣ್ಣಾರಾವ್ ಗಣಮುಖಿ:–** ಆ ಬಗ್ಗೆ ನನಗೆ ಮಾಹಿತಿಯಿಲ್ಲ.

**ಶ್ರೀ ಬಲ್ವಂತ್ ರಾವ್:–** ಸರ್ಕಾರವು ಈ ವಿಷಯವನ್ನು ತನಿಖೆ ಮಾಡಲು ಸಮಿತಿಯನ್ನು ನೇಮಕ ಮಾಡುತ್ತದೆಯೇ?

**ಶ್ರೀ ಅಣ್ಣಾರಾವ್ ಗಣಮುಖಿ:–** ಇದರ ಅವಶ್ಯಕತೆಯಿಲ್ಲ.

**ಶ್ರೀ ಬಲ್ವಂತ್ ರಾವ್:–** ಶಾಲೆಯನ್ನು ಮುಚ್ಚಿದ್ದರಿಂದಾಗಿ, ಶಾಲೆಯ ಶೇಕಡಾವಾರು ತೇರ್ಗಡೆಯಲ್ಲಿ ಇಳಿಮುಖವುಂಟಾಯಿತೆ ಎಂಬ ವಿಷಯವನ್ನು ನಾನು ತಿಳಿದುಕೊಳ್ಳಬಹುದೇ?

**ಶ್ರೀ ಅಣ್ಣಾರಾವ್ ಗಣಮುಖಿ:–** ಶಾಲೆಯ ಶೇಕಡಾವಾರು ತೇರ್ಗಡೆಯಲ್ಲಿ ಯಾವುದೇ ನಿರ್ದಿಷ್ಟ ಇಳಿಮುಖವುಂಟಾಗಲಿಲ್ಲ. ಇಡೀ ಹೈದ್ರಾಬಾದ್ ಕರ್ನಾಟಕದ ಶೇಕಡಾವಾರನ್ನು ನಾನು ಪಡೆದಿದ್ದೇನೆ. 1961ರಲ್ಲಿ, ಅಲ್ಲಿರುವ ನಾಲ್ಕು ವಿವಿದೋದ್ದೇಶ ಪ್ರೌಢ ಶಾಲೆಗಳ ಶೇಕಡಾವಾರು 26.5 ಆಗಿರುತ್ತದೆ.

**ಶ್ರೀ ಬಲ್ವಂತ್ ರಾವ್**:– ಈ ಶಾಲೆಯನ್ನು ದೀರ್ಘಕಾಲದವರೆಗೆ ಮುಚ್ಚಿದ್ದ ಕಾರಣ, ಫಲಿತಾಂಶ ತೀರಾ ಕಡಿಮೆಯದಾಗಿತ್ತು. ಹಾಗಾಗಿ, ವಿದ್ಯಾರ್ಥಿಗಳಿಗೆ ವ್ಯಾಪಕ ಮಾರ್ಗದರ್ಶನ ನೀಡುವಂತೆ ಮುಖ್ಯೋಪಾಧ್ಯಾಯರಿಗೆ ಸೂಚನೆ ನೀಡಲಾಗಿತ್ತು, ಆದರೆ, ವಸ್ತುತಃ ಅಲ್ಲಿ ಯಾವ ಮಾರ್ಗದರ್ಶನವನ್ನೂ ಕೊಟ್ಟಿರಲಿಲ್ಲ. ಆದ್ದರಿಂದ ಫಲಿತಾಂಶ ತೀರಾ ಕಡಿಮೆಯಾಗಿತ್ತು. ವಿಷಯ ಇದಲ್ಲವೇ?

**ಶ್ರೀ ಅಣ್ಣಾರಾವ್ ಗಣಮುಖಿ**:– ಶಾಲೆಯನ್ನು ಮುಚ್ಚಿದ ಕಾರಣದಿಂದ ಫಲಿತಾಂಶ ತೀರಾ ಕಡಿಮೆಯಾಗಿತ್ತು ಎಂಬುದಾಗಿ ನಾನು ಭಾವಿಸುವುದಿಲ್ಲ. ಅಲ್ಲಿ ಇತರ ಮೂರು ಪ್ರೌಢಶಾಲೆಗಳೂ ಇವೆ. ಅವೆಲ್ಲವನ್ನು ಒಟ್ಟಾಗಿ ಸೇರಿಸಿ 1960ರ ಫಲಿತಾಂಶಗಳನ್ನು 1961ನೇ ವರ್ಷದ ಫಲಿತಾಂಶಗಳಿಗೆ ನಾವು ಹೋಲಿಸಿದಾಗ ಅಂಕಿಗಳು ಈ ರೀತಿ ಇವೆ: 1960 ... 35.2

1961 ... 26.5

ಹಾಗಾಗಿ ಎಲ್ಲ ಶಾಲೆಗಳ ಫಲಿತಾಂಶಗಳನ್ನು ಒಟ್ಟಾಗಿ ತೆಗೆದುಕೊಂಡರೂ ಕೂಡ ಕಡಿಮೆಯಾಗಿದೆ.

**ಶ್ರೀ ಜೆ.ಬಿ. ಮಲ್ಲಾರಾಧ್ಯ**:– ಶಾಲೆಯನ್ನು ಒಂದು ತಿಂಗಳು 25 ದಿನಗಳವರೆಗೆ ಮುಚ್ಚಿರುವಂತಹ ವಿಷಯದಲ್ಲಿ ಜಿಲ್ಲಾಧಿಕಾರಿಯು ಇಲಾಖಾ ಮುಖ್ಯಸ್ಥರೊಂದಿಗೆ ಸಮಾಲೋಚಿಸಿದ್ದರೆ? ಈ ವಿಷಯದಲ್ಲಿ, ಸರ್ಕಾರದ ಮುಂದಿರುವ ವರದಿ ಏನು?

**ಶ್ರೀ ಅಣ್ಣಾರಾವ್ ಗಣಮುಖಿ**:– ಜಿಲ್ಲಾಧಿಕಾರಿಯು, ಸ್ಥಳೀಯವಾಗಿ ಕಾನೂನು ಮತ್ತು ಸುವ್ಯವಸ್ಥೆಯ ಪರಿಸ್ಥಿತಿಯನ್ನು ಕಾಪಾಡಲು ಜವಾಬ್ದಾರರಾಗಿರುತ್ತಾರೆ. ಆದ್ದರಿಂದ ಅವರು ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರೊಂದಿಗೆ ಸಮಾಲೋಚಿಸಿಲ್ಲ, ಆದರೆ ಅವರು ಶಾಲೆಯನ್ನು ಮುಚ್ಚಲು ಆದೇಶಿಸಿದರು ಹಾಗೂ ಆನಂತರ ಪರಿಸ್ಥಿತಿಯನ್ನು ಗಮನಿಸಿ ಅವರು ಶಾಲೆಯ ಪುನರಾರಂಭಕ್ಕೆ ಆದೇಶಿಸಿದರು.

**ಶ್ರೀ ಜೆ.ಬಿ. ಮಲ್ಲಾರಾಧ್ಯ**:– ಅವರು ತೆಗೆದುಕೊಂಡಿರುವ ಈ ಅಸಾಧಾರಣ ಕಾರ್ಯವಿಧಾನಕ್ಕೆ ಸಂಬಂಧಿಸಿದಂತೆ ಅವರು ಸರ್ಕಾರಕ್ಕೆ ಸಲ್ಲಿಸಿದ ವಿಶೇಷ ವರದಿ ಏನು?

**ಶ್ರೀ ಅಣ್ಣಾರಾವ್ ಗಣಮುಖಿ**:– ಈ ಪ್ರಶ್ನೆಯನ್ನು ಒಳಾಡಳಿತ ಇಲಾಖೆಗೆ ಪ್ರಶ್ನಿಸಬಹುದು.

**ಶ್ರೀ ಜೆ.ಬಿ. ಮಲ್ಲಾರಾಧ್ಯ**:– ಶಿಕ್ಷಣ ಸಚಿವರು ಈ ಪ್ರಶ್ನೆಗೆ ಉತ್ತರ ಹೇಳಬೇಕಾಗುತ್ತದೆ. ಒಳಾಡಳಿತ ಇಲಾಖೆಯನ್ನು ಸಮಾಲೋಚಿಸುವುದು ಹಾಗು ನನಗೆ ಉತ್ತರಿಸುವುದು ಅವರ ಕೆಲಸ, ನಾನು ಒಳಾಡಳಿತ ಇಲಾಖೆಗೆ ಪ್ರಶ್ನಿಸುವುದಿಲ್ಲ.

**ಶ್ರೀ ಅಣ್ಣಾರಾವ್ ಗಣಮುಖಿ:–** ವಾಸ್ತವವಾಗಿ ಪ್ರಶ್ನೆ (ಬಿ) "ಮೇಲಿನ ಶಾಲೆಯನ್ನು ಮುಚ್ಚಿದುದರಿಂದ ವಿದ್ಯಾರ್ಥಿಗಳು ತೊಂದರೆಗಳಿಗೆ ಈಡಾದರು ಎನ್ನುವುದು ಒಂದು ವಾಸ್ತವವಲ್ಲವೆ?" ಎಂಬುದು ಪ್ರಶ್ನೆಯನ್ನು ಈಗ ಸದಸ್ಯರು ಕೇಳಿದಂತೆ ಹಿಂದೆಯೇ ಸ್ಪಷ್ಟವಾಗಿ ಕೇಳಿದ್ದರೆ, ಆಗ ಆ ವಿಷಯವನ್ನು ನಾವು ಪಡೆಯಬಹುದಾಗಿತ್ತು.

**ಶ್ರೀ ಬಿ. ಶ್ಯಾಮಸುಂದರ್:–** ಆ ಎಲ್ಲ ವಿದ್ಯಾರ್ಥಿಗಳನ್ನು ಪರೀಕ್ಷೆಗೆ ಹಾಜರಾಗುವುದರಿಂದ ಡಿಬಾರ್ ಮಾಡಿರುವುದು ವಾಸ್ತವ ಸಂಗತಿಯೇ?

**ಶ್ರೀ ಅಣ್ಣಾರಾವ್ ಗಣಮುಖಿ:–** ಆ ಮಾಹಿತಿ ನನ್ನಲ್ಲಿಲ್ಲ.

**ಮಾನ್ಯ ಸಭಾಧ್ಯಕ್ಷರು:–** ಪ್ರಶ್ನೆಗಳು ಮುಗಿದವು.

# ಮೈಸೂರು ನಗರಕ್ಕೆ ಸಿಮೆಂಟ್ ಸರಬರಾಜು

**ಶ್ರೀ ಶ್ಯಾಮಸುಂದರ್ (ಭಾಲ್ಕಿ):**– ಸರ್ಕಾರವು ದಯಮಾಡಿ ಈ ಮುಂದಿನವುಗಳನ್ನು ತಿಳಿಸುತ್ತದೆಯೇ?

ಎ) 1960ನೇ ಡಿಸೆಂಬರ್‌ವರೆಗೆ ಸಿಮೆಂಟನ್ನು ಮೈಸೂರು ನಗರಕ್ಕೆ ಮೆಸರ್ಸ್ ಮೈಸೂರು ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ, ಭದ್ರಾವತಿ ಇವರು ಸರಬರಾಜು ಮಾಡುತ್ತಿದ್ದು ಅದನ್ನು ಈಗ ಮೆಸರ್ಸ್ ದಿ ಸಿಮೆಂಟ್ ಮಾರ್ಕೆಟಿಂಗ್ ಕಂಪನಿ ಆಫ್ ಇಂಡಿಯಾ (ಪ್ರೈವೇಟ್) ಲಿಮಿಟೆಡ್, ಬೆಂಗಳೂರು ಇವರು ಸರಬರಾಜು ಮಾಡುತ್ತಿರುವುದು ವಾಸ್ತವವೇ?

ಬಿ) ಗ್ರಾಹಕರಿಗೆ ವಿತರಣೆ ಮಾಡಲು ಮೈಸೂರು ನಗರಕ್ಕೆ ಪ್ರತಿ ತ್ರೈಮಾಸಿಕಕ್ಕೆ ಹಂಚಿಕೆ ಮಾಡಲಾಗಿದ್ದ ಸಿಮೆಂಟಿನ ಪ್ರಮಾಣ;

ಸಿ) ಮೈಸೂರು ನಗರದಲ್ಲಿರುವ ಸಿಮೆಂಟ್ ದಾಸ್ತಾನುದಾರರ ಅಥವಾ ವ್ಯಾಪಾರಿಗಳ ಸಂಖ್ಯೆ ಮತ್ತು ಅವರ ಹೆಸರುಗಳು;

ಡಿ) ಪ್ರತಿಯೊಬ್ಬ ಸಿಮೆಂಟ್ ದಾಸ್ತಾನುದಾರನಿಗೆ ಅಥವಾ ವ್ಯಾಪಾರಿಗೆ ಹಂಚಿಕೆ ಮಾಡಲಾಗಿದ್ದ ಸಿಮೆಂಟಿನ ಪ್ರಮಾಣ;

ಇ) ಹಂಚಿಕೆಗಳನ್ನು ಮಾಡುವಾಗ ಅಳವಡಿಸಿಕೊಂಡ ಕಾರ್ಯನೀತಿ;

**ಶ್ರೀ ಬಿ.ಡಿ. ಜತ್ತಿ (ಮುಖ್ಯಮಂತ್ರಿ)**

ಎ) ಹೌದು.

ಬಿ) ಸಿಮೆಂಟನ್ನು ಜಿಲ್ಲಾವಾರು ಹಂಚಿಕೆ ಮಾಡಲಾಗಿದೆ. ಮೈಸೂರು ನಗರಕ್ಕೆ ಹಾಗೆ ಯಾವುದೇ ಪ್ರತ್ಯೇಕ ಸಿಮೆಂಟ್ ಹಂಚಿಕೆ ಇಲ್ಲ. ಚಾಲ್ತಿ ತ್ರೈಮಾಸಿಕದಲ್ಲಿ (ಏಪ್ರಿಲ್–ಜೂನ್ 1961) ಇಲ್ಲ. ಒಟ್ಟು 1600 ಟನ್‌ಗಳಷ್ಟು ಸಿಮೆಂಟ್ ಹಂಚಿಕೆಯನ್ನು ಮೈಸೂರು ಜಿಲ್ಲೆಗೆ ಮಾಡಲಾಗಿದೆ, ಇದರಲ್ಲಿ ಮೈಸೂರು ನಗರವೂ ಸೇರುತ್ತದೆ.

ಸಿ) ಕೆಳಗೆ ಸೂಚಿಸಿರುವಂತೆ ಒಂಬತ್ತು:–

1. ಮೆಸರ್ಸ್ ಬಿ.ವಿ. ನಾರಾಯಣ ಸ್ವಾಮಿ ಅಂಡ್ ಕಂಪನಿ, ಮೈಸೂರು
2. ಮ: ಕನ್ಯಕಾ ಪರಮೇಶ್ವರಿ ಸಹಕಾರ ಸಂಘ ನಿಯಮಿತ, ಮೈಸೂರು
3. ತಾಲೂಕು ಸಹಕಾರ ಮಾರುಕಟ್ಟೆ ಸಂಘ ನಿಯಮಿತ, ಮೈಸೂರು
4. ಶ್ರೀ ಎಂ.ಆರ್. ಸ್ವಾಮಿ, ವ್ಯಾಪಾರಿ, ಅಶೋಕ ರಸ್ತೆ, ಮೈಸೂರು

5. ಮೆಸರ್ಸ್ ಚಾಮುಂಡಿ ಕ್ಯೂರಿಂಗ್ ವರ್ಕ್ಸ್, ವಾಣಿ ವಿಲಾಸ ಮೊಹಲ್ಲ, ಮೈಸೂರು

6. ಶ್ರೀ ಎಚ್. ದುರ್ಗಸಿಂಗ್, ನಂ. 527, ಚೆಲುವಾಂಬ ಅಗ್ರಹಾರ, ಮೈಸೂರು.

7. ಶ್ರೀ ಎಂ. ವೀರಭದ್ರಪ್ಪ, ಜನರಲ್ ಮರ್ಚಂಟ್, ರಾಮಾನುಜ ರಸ್ತೆ, ಮೈಸೂರು

8. ಶ್ರೀ ಶೇಕ್ ಮುಸ್ಲೀ ಹುದ್ದೀನ್, ಮಾಲೀಕರು, ಜನರಲ್ ಸ್ಟೋರ್ಸ್, ಮಂಡಿ ವ್ಯಾಪಾರಿ, ಮೈಸೂರು.

9. ಶ್ರೀ ಕೆ.ಪಿ. ಕರಿಮುದ್ದೀನ್, 2324, ಸ್ವಾದೆ ರಸ್ತೆ, ಮಂಡಿ ಮೊಹಲ್ಲ, ಮೈಸೂರು.

(ಡಿ) ಮತ್ತು (ಇ) ಪ್ರತಿಯೊಬ್ಬ ದಾಸ್ತಾನುದಾರನಿಗೆ ಹಂಚಿಕೆ ಮಾಡಲಾದ ಸಿಮೆಂಟಿನ ಪ್ರಮಾಣವು, ಭಾರತ ಸರ್ಕಾರದ ಕಾರ್ಯನೀತಿಯ ಪ್ರಕಾರ, 31ನೇ ಮಾರ್ಚ್ 1956ಕ್ಕೆ ಕೊನೆಗೊಳ್ಳುವ ಮೂರು ವರ್ಷಗಳಲ್ಲಿ ಪ್ರತಿಯೊಬ್ಬ ವ್ಯಾಪಾರಿಯ ಸರಾಸರಿ ಎತ್ತುವಳಿಯ ಮೇಲೆ ಆಧಾರತವಾಗಿರುತ್ತದೆ. ತ್ರೈಮಾಸಿಕ ಅವಧಿಯಲ್ಲಿ ಪ್ರತಿಯೊಂದು ಜಿಲ್ಲೆಗೆ ಮಂಜೂರು ಮಾಡಲಾದ ಕೋಟಾ (ಪ್ರಮಾಣವನ್ನು) ಜಿಲ್ಲೆಗಳಿಗೆ ಸಂಯೋಜಿತವಾದ ಸಿಮೆಂಟ್ ವರ್ಕ್ಸ್‌ನ ಮಾರಾಟ ಏಜೆಂಟರುಗಳಿಂದ ಜಿಲ್ಲೆಗಳ ಹಲವಾರು ದಾಸ್ತಾನುದಾರರಿಗೆ ಮೇಲಿನ ಆಧಾರದ ಮೇಲೆ ಪ್ರಮಾಣಾನುಸಾರವಾಗಿ ವಿತರಿಸಲಾಗಿದೆ. ದಾಸ್ತಾನನ್ನು ದಾಸ್ತಾನುದಾರರಿಗೆ ತಲುಪಿಸುವುದನ್ನು ರಾಜ್ಯ ಮಾರಾಟ ನಿಗಮ, ಮದ್ರಾಸ್, ಇದರ ಪ್ರಾದೇಶಿಕ ಸಿಮೆಂಟ್ ಅಧಿಕಾರಿಯು ನಿಯಂತ್ರಿಸುತ್ತಾರೆ.

# ಮೈಸೂರು ಪಾನ ನಿರೋಧ ವಿಧೇಯಕ 1959ರ ಚರ್ಚೆಯಲ್ಲಿ

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:–** ಇದು ನನ್ನ ಅಜ್ಞಾನ ಅಥವಾ ಅಂಥ ಯಾವುದೇ ಪರಿಸ್ಥಿತಿಯಲ್ಲ. ನನ್ನ ಮಿತ್ರರಾದ ಶ್ರೀ ಮಲ್ಲಾರಾಧ್ಯ ಇವರಾಗಲಿ ಅಥವಾ ಸನ್ಮಾನ್ಯ ಸಭಾಪತಿಗಳು ಆಗಲಿ ನನ್ನ ಬಗ್ಗೆ ತಪ್ಪು ತಿಳಿದುಕೊಳ್ಳಬಾರದು. ನಿಯಮ 9ರ ಅಡಿಯಲ್ಲಿ ಪ್ರತಿಯೊಂದು ಅಧಿವೇಶನದ ಪ್ರಾರಂಭ ಎಂದರೆ ಪ್ರತಿಯೊಂದು ಉಪವೇಶನದ ಪ್ರಾರಂಭವೆಂಬುದಾಗಿ ನಾನು ಭಾವಿಸಿದ್ದೇನೆ.

**ಮಾನ್ಯ ಸಭಾಧ್ಯಕ್ಷರು:–** ಇದು ಸಂಪೂರ್ಣವಾಗಿ ಸನ್ಮಾನ್ಯ ಸದಸ್ಯರು ಮಾಡಿರುವ ತಪ್ಪಾಗಿದೆ. ಕಾಲ ಕಾಲಕ್ಕೆ ಸದನದ ಅಧಿವೇಶನವನ್ನು ಮುಕ್ತಾಯ ಮಾಡಿದಾಗ ಅಧಿವೇಶನವು ಕೊನೆಗಾಣುತ್ತದೆ. ಸದನದ ಅಧಿವೇಶನವನ್ನು ಮುಂದೂಡಿದಾಗ ಅಧಿವೇಶನವು ಮುಂದುವರೆಯುತ್ತದೆ. ಅಂಥ ವ್ಯತ್ಯಾಸವನ್ನು ಅಂಥ ಕಾಲವು ಕೊನೆಗೊಂಡ ನಂತರವೂ ಸದಸ್ಯರು ಅರ್ಥಮಾಡಿಕೊಳ್ಳಲಾಗದಿದ್ದರೆ, ಇದಕ್ಕೆ ನಾನು ನಿಜವಾಗಿಯೂ ವ್ಯಥೆಪಡುತ್ತೇನೆ.

**ಶ್ರೀ ಆಲೂರು ಹನುಮಂತಪ್ಪ:–** (ಸಭಾಪತಿಯವರ ಅಧ್ಯಕ್ಷತೆಯಲ್ಲಿ)

**ಶ್ರೀ ಬಿ.ಆರ್. ಸುಂತನ್‌ಕರ್:–** ನಾನು ಪಂಡಿತ್ ಜವಹರಲಾಲ್ ನೆಹರುರವರ ಬಗ್ಗೆ ಪ್ರಸ್ತಾಪಿಸಿದ್ದೆ. ಇದು ಏನೆಂದರೆ ಅವರು ಕಾಂಗ್ರೆಸ್ ಅಧಿವೇಶನದಲ್ಲಿ ಹೇಳಿರುವುದಾಗಿರುತ್ತದೆ. ಬುಡಕಟ್ಟು ಪ್ರದೇಶದಲ್ಲಿ ನಿಷೇಧವನ್ನು ಹೇರಲು ಸಾಧ್ಯವಾಗುವುದಿಲ್ಲ ಅಥವಾ ಅವರು ಹಾಗೆ ಮಾಡಲು ಬಯಸುವುದಿಲ್ಲ ಮತ್ತು ಅಂಥ ವಿಷಯಗಳನ್ನು ಒತ್ತಾಯ ಮತ್ತು ಬಲವಂತದಿಂದ ಮಾಡುವಂತಿಲ್ಲ ಎಂಬುದಾಗಿ ಅವರು ಹೇಳಿದ್ದಾರೆ. ಇದು ಅವರು ಬುಡಕಟ್ಟು ಪ್ರದೇಶಗಳ ಬಗ್ಗೆ ಹೇಳಿರುವುದಾಗಿರುತ್ತದೆ. ನನ್ನ ಮಿತ್ರರಾದ ಶ್ರೀ ನರಸಿಂಹನ್ ನಿನ್ನೆ ತಾನೇ ಹೇಳಿರುವಂತೆ ಇದೇ ವಿಷಯವು ಗಣಿ ಪ್ರದೇಶಕ್ಕೂ ಅನ್ವಯಿಸುತ್ತದೆ; ಮತ್ತು ಅದೇ ರೀತಿಯಾಗಿ ಇದು ಚಿನ್ನದ ಗಣಿಗಳಲ್ಲಿನ ಕಾರ್ಮಿಕರಿಗೂ ಅನ್ವಯಿಸುತ್ತದೆ. ಸರ್ಕಾರವು, ಉನ್ನತ ನಾಯಕರು ನೀಡಿರುವ ಹೇಳಿಕೆಗಳಿಂದ ಸಮಸ್ಯೆಯನ್ನು ಬಿಡಿಸಲು ನೆರವಾಗುವ ಅಂಶವನ್ನು ಪಡೆದುಕೊಂಡು ಬುದ್ಧಿವಂತಿಕೆಯಿಂದ ಇವರನ್ನು ಮೇಲಕ್ಕೆತ್ತಬೇಕು ಮತ್ತು ಪಾನ ನಿಷೇಧ ಶಾಸನ ರಚನೆಯನ್ನು ರದ್ದು ಮಾಡಬೇಕೆಂಬುದು ನನ್ನ ಭಾವನೆ. ಇದನ್ನು ನಿಷೇಧದ ಮೂಲಕ ಏನಾದರೂ ಸಫಲಗೊಳಿಸುವಂತಿದ್ದರೆ, ಅದನ್ನು ಶಿಕ್ಷಣವನ್ನು ನೀಡುವ ಮೂಲಕ ಮತ್ತು ಅರಿವುಂಟುಮಾಡುವ ಮೂಲಕ ಮಾತ್ರ ಸಫಲಗೊಳಿಸಬಹುದಾಗಿರುತ್ತದೆಯೇ ಹೊರತು ಶಾಸನ ರಚನೆಯಿಂದಲ್ಲ. ಜನರನ್ನು ಕುಡಿಯಲು ಪ್ರೇರೇಪಿಸುವಂತಹ ಕಾರಣಗಳನ್ನು ಪರಿಶೀಲಿಸಬೇಕು ಮತ್ತು ಪತ್ತೆ ಹಚ್ಚಬೇಕು ಮತ್ತು ಈ ಕುಡಿಯುವ ಆಲೋಚನೆಗಳನ್ನು ಅವರ ತಲೆಯಿಂದ ತೆಗೆದುಹಾಕಬೇಕು. ಜನರೇಕೆ ಒಂದು ನಿಯಮದಂತೆ ಮದ್ಯಪಾನ ಮಾಡುತ್ತಾರೆ? ಏಕೆಂದರೆ ಅವರಿಗೆ ಜೀವನವು ದುಃಖದಿಂದ ಕೂಡಿದ್ದು, ಚಿಂತೆಗಳಿಂದ ತುಂಬಿರುತ್ತವೆ. ಹಾಗೆಯೇ ಅವರಿಗೆ ಜೀವನವು ಒಂದು ಗುಲಾಮ ಚಾಕರಿ ಮಾಡುವಂತಿರುತ್ತದೆ. ಅವರಿಗೆ ಜೀವನವು ನರಕದಂತೆ ಕಂಡಾಗ, ಅವರು

ಕುಡಿತದಲ್ಲಿ ಪ್ರಜ್ಞಾಶೂನ್ಯ ಸ್ಥಿತಿಗೆ ಹೋಗಬಯಸುತ್ತಾರೆ. ಹಾಗೆಯೇ ನೆಮ್ಮದಿಗಾಗಿ ಅವರು ಕುಡಿಯುತ್ತಾರೆ. ಜೀವನವು ಯೋಗ್ಯವಾಗಿ ಮತ್ತು ಸಂತೋಷಕರವಾಗಿದ್ದರೆ, ಅವರು ಕುಡಿಯುವುದಿಲ್ಲ. ಒಬ್ಬ ಕೆಲಸಗಾರನಿಗೆ ಸಭ್ಯ ಮನುಷ್ಯನಂತೆ ಬದುಕುವ ಸಾಕಷ್ಟು ಮಾರ್ಗಗಳನ್ನು ತೋರಿಸಿದಾಗ ಮತ್ತು ಹಾಗೆಯೇ ಆತನಿಗೆ ತಕ್ಕಮಟ್ಟಿಗೆ ಕೆಲಸವು ಇರುವಂತೆ ಖಚಿತಪಡಿಸಿದಾಗ, ಆತನು ಕಷ್ಟಪಟ್ಟು ದುಡಿದು ಗಳಿಸಿದ ಹಣವನ್ನು ಕುಡಿತಕ್ಕಾಗಿ ಹಾಳು ಮಾಡುವ ಮೂಲಕ ಈ ಎಲ್ಲಾ ಅನುಕೂಲಗಳನ್ನು ಕಳೆದುಕೊಳ್ಳುವ ತೊಂದರೆ ತೆಗೆದುಕೊಳ್ಳುವುದಿಲ್ಲ. ಮಿತಿಮೀರಿದ ಕುಡಿತ ಮತ್ತು ಕುಡಿತದ ಚಟದ ವಿರುದ್ಧ ಹೆಚ್ಚಿನ ಪ್ರಮಾಣದಲ್ಲಿ ಅರಿವನ್ನುಂಟುಮಾಡುವ ಪ್ರಚಾರವನ್ನು ಮಾಡಬೇಕು, ಹಾಗೆಯೇ ವಿನೋದ ಮತ್ತು ಮನರಂಜನೆ ಹಾಗೂ ಆನಂದ ನೀಡುವಂಥ ಪರ್ಯಾಯ ಸೌಕರ್ಯಗಳಿರಬೇಕು; ಆಗ ಆತನು ಪ್ರೇರಣೆಯಿಲ್ಲದೆ ತಂತಾನೇ ಮದ್ಯಪಾನ ನಿಷೇಧವನ್ನು ಪಾಲಿಸುತ್ತಾನೆ. ಕುಡಿತಕ್ಕೆ ಯಾವುದೇ ಪ್ರಚೋದನೆಯು ಇರಕೂಡದು, ಕುಡಿತದ ಪ್ರಚೋದನೆಯಿಂದಾಗಿ ಕಳೆದ 14 ವರ್ಷಗಳ ಅವಧಿಯಲ್ಲಿ ಅನುಭವಕ್ಕೆ ಬಂದಿರುವಂತೆ, ಇದು ಅತ್ಯಂತ ಕೆಟ್ಟದಾದ ಪರಿಣಾಮಗಳಿಗೆ ಕಾರಣವಾಗುತ್ತದೆ.

ಕೊನೆಯದಾಗಿ, ನನ್ನ ಭಾಷಣವನ್ನು ಮುಗಿಸುವುದಕ್ಕೆ ಮುಂಚೆ, ನಾನು ಸರ್ಕಾರಕ್ಕೆ ಮನವಿ ಮಾಡುತ್ತೇನೆ, ಹಾಗೆಯೇ ಅನುಭವದಿಂದ ಕಲಿಯಲು, ಇದಕ್ಕೆ ವಸ್ತುನಿಷ್ಠೆಯುಳ್ಳವರಾಗಿರುವಂತೆ ಮತ್ತು ಜನರನ್ನು ಬುದ್ಧಿವಂತಿಕೆಯಿಂದ ಮೇಲಕ್ಕೆ ಎತ್ತುವಂತೆ, ಅನುಭವದ ಮೂಲಕ ಬುದ್ಧಿವಂತಿಕೆಯಿಂದ ಜನರನ್ನು ಮೇಲಕ್ಕೆ ಎತ್ತುವಂತೆ ಈ ವಿಧೇಯಕವನ್ನು ಮಂಡಿಸಿದ ಮಂತ್ರಿಗಳಿಗೆ ನಾನು ಮನವಿ ಮಾಡಿಕೊಳ್ಳುತ್ತೇನೆ. ಇವರು ಎರಡೂ ಕಡೆಯಿಂದಲೂ ಧೈರ್ಯವನ್ನು ವಹಿಸಲಿ ಮತ್ತು ಈ ಅವಿವೇಕದ ಮದ್ಯಪಾನ ನಿಷೇಧ ನೀತಿಯನ್ನು ಕೈಬಿಡಲಿ, ಇವರು ಹೀಗೆ ಮಾಡುವ ಮೂಲಕ ರಾಜ್ಯಕ್ಕೆ ಮತ್ತು ರಾಷ್ಟ್ರಕ್ಕೆ ಉತ್ತಮವಾದ ಮತ್ತು ಹೆಚ್ಚಿನ ಸೇವೆ ಸಲ್ಲಿಸಲಿ, ನಿಮಗೆ ಧನ್ಯವಾದಗಳು.

**ಮಾನ್ಯ ಸಭಾಪತಿಯವರು:–** ಶ್ರೀ ಶ್ಯಾಮಸುಂದರ್.

**ಶ್ರೀ ಜೆ.ಎನ್. ಪುಟ್ಟಣ್ಣ:–**ನೆನ್ನೆ ನನ್ನ ಹೆಸರನ್ನು ನೀಡಿದ್ದು, ಇಂದಿನವರೆಗೆ ನನಗೆ ಮಾತನಾಡಲು ಅವಕಾಶವನ್ನು ನೀಡಿರುವುದಿಲ್ಲ. ಸನ್ಮಾನ್ಯ ಅಧ್ಯಕ್ಷರಿಂದ ನಾನು ನಿರೀಕ್ಷಿಸಿದ್ದು ಇದನ್ನಲ್ಲ.

**ಶ್ರೀ ವೆಂಕಟೇಗೌಡ:–** ಸಭಾಪತಿಯವರ ದೃಷ್ಟಿಗೆ ಯಾರು ಬೀಳುತ್ತಾರೆಯೋ ಅವರನ್ನು ಕರೆಯಬೇಕೆಂದು ನಾನು ಹೇಳಬಯಸುತ್ತೇನೆ. ಇದು ಸುಸ್ಥಾಪಿತವಾದ ಸಂಪ್ರದಾಯವಾಗಿರುತ್ತದೆ; ಆದರೆ ಇದು ಸಭಾಪತಿಯವರಿಗೆ ನೀಡಲಾದ ಪಟ್ಟಿಯ ಆಧಾರದ ಮೇಲೆ ಇರಕೂಡದು.

**ಮಾನ್ಯ ಸಭಾಪತಿಯವರು:–** ತಮ್ಮ ಹೆಸರುಗಳನ್ನು ಕಳುಹಿಸಿರುವಂತಹವರಿಗೆ ಆದ್ಯತೆಯನ್ನು ನೀಡಬೇಕೆಂಬುದಾಗಿ ನಾನು ಭಾವಿಸಿದ್ದೇನೆ. ಇಲ್ಲಿನ ಕಾರ್ಯವಿಧಾನವು ಏನೆಂದರೆ, ಕಾಂಗ್ರೆಸ್ ಪಕ್ಷವು ಮಾತನಾಡಲು ಇಷ್ಟಪಡುವ ಹೆಸರುಗಳನ್ನು ಕಳುಹಿಸುತ್ತದೆ. ಹಾಗೆಯೇ ಇತರ ಪಕ್ಷಗಳೂ ಸಹ ಮಾಡುತ್ತವೆ.

**ಶ್ರೀ ಜೆ.ಬಿ. ಮಲ್ಲಾರಾಧ್ಯ**:– ವಿರೋಧ ಪಕ್ಷದ ಪರವಾಗಿ ಪಟ್ಟಿಯನ್ನು ನೀಡಲಾಗಿದೆ ಮತ್ತು ಸಭಾಧ್ಯಕ್ಷರು ಇದು ಅಗತ್ಯವಾಗಿರುವುದಾಗಿ ಪರಿಗಣಿಸಿದ ಹೊರತು, ಆ ಕ್ರಮದಲ್ಲಿ ಅವಕಾಶಗಳನ್ನು ನೀಡಲಾಗುತ್ತದೆ ಎಂಬುದು ಸಾಮಾನ್ಯವಾದ ಸಂಪ್ರದಾಯವಾಗಿದೆ. ಶ್ರೀ ಪುಟ್ಟಣ್ಣ ಇವರ ಹೆಸರು ಪಟ್ಟಿಯಲ್ಲಿ ಇರಲೇಬೇಕು.

**ಮಾನ್ಯ ಸಭಾಪತಿಯವರು**:– ಮೊದಲ ಸಂದರ್ಭದಲ್ಲಿ ಶ್ರೀ ಶ್ಯಾಮಸುಂದರ್ ಇವರಿಗೆ ಮಾತನಾಡಲು ಅವಕಾಶ ನೀಡಬೇಕೆಂದು ನನಗೆ ಸಭಾಧ್ಯಕ್ಷರು ಹೇಳಿದ್ದಾರೆ. ಅವರು ಭಾಷಣ ಮಾಡಲಿ, ನಂತರ ಇತರರಿಗೆ ಅವಕಾಶಗಳನ್ನು ನೀಡಲಾಗುವುದು.

**ಶ್ರೀ ಎಸ್.ಡಿ. ಕೊತವಾಲೆ**:– ಈ ಕಡೆಯಿಂದ, ಇದುವರೆಗೆ ಯಾರೂ ಮಾತನಾಡಿಲ್ಲ ಮತ್ತು ನಾನು ಮಾತನಾಡುವ ನನ್ನ ಇಚ್ಛೆಯನ್ನು ವ್ಯಕ್ತಪಡಿಸಿದ್ದೇನೆ, ಆದರೆ ಏಕೋ ಏನೋ ನನ್ನನ್ನು ಕರೆಯಲಾಗಿಲ್ಲ. ಕೊನೇಪಕ್ಷ ಮುಂದಿನ ಅವಕಾಶವಾದರೂ ನನಗೆ ಸಿಗಬೇಕು.

**ಮಾನ್ಯ ಸಭಾಪತಿಯವರು**:– ಸದಸ್ಯರಿಗೆ ಅವಕಾಶಗಳನ್ನು ನೀಡುವಲ್ಲಿ, ಹಿಂದಿನ ಸಭೆಗಳಲ್ಲಿ ಅನುಸರಿಸಲಾದಂತಹ ಸಾಮಾನ್ಯ ಕಾರ್ಯವಿಧಾನವನ್ನು ನಾವು ಅಳವಡಿಸಿಕೊಳ್ಳಬೇಕಾಗುತ್ತದೆ. ಈ ಪಟ್ಟಿಯನ್ನು ಕಾಂಗ್ರೆಸ್ ಪಕ್ಷದ ಸಚೇತಕರಿಂದ ಹಾಗೆಯೇ ವಿರೋಧ ಪಕ್ಷದ ನಾಯಕನಿಂದಲೂ ಸಹ ನೀಡಲಾಗುತ್ತದೆ. ಪಕ್ಷೇತರ ಸದಸ್ಯರು ಸಹ ತಮ್ಮ ಹೆಸರುಗಳನ್ನು ನೀಡುತ್ತಾರೆ ಅಥವಾ ಪತ್ರವನ್ನು ಕಳುಹಿಸುತ್ತಾರೆ.

**ಶ್ರೀ ಜಿ.ಎನ್. ಪುಟ್ಟಣ್ಣ**:– ನಾನು ಹೇಳುವುದೇನೆಂದರೆ, ನಿನ್ನೆ ನೀಡಲಾದ ಪಟ್ಟಿಗೆ ಬದ್ಧವಾಗಿರುವುದಿಲ್ಲ. ಏಕೆ ಈ ಬದಲಾವಣೆ?

**ಮಾನ್ಯ ಸಭಾಪತಿಯವರು**:– ನಾನು ಇದನ್ನು ಪರೀಕ್ಷಿಸುತ್ತೇನೆ.

**ಶ್ರೀ ಜಿ.ಎನ್. ಪುಟ್ಟಣ್ಣ**:– ಇದನ್ನು ನಿನ್ನೆ ನೀಡಲಾಗಿರುತ್ತದೆ.

**ಮಾನ್ಯ ಸಭಾಪತಿಯವರು**:– ನಾನು ಈ ಬಗ್ಗೆ ವಿಚಾರ ಮಾಡುತ್ತೇನೆ.

ಮಧ್ಯಾಹ್ನ **4–30**

**ಶ್ರೀ ಬಿ. ಶ್ಯಾಮಸುಂದರ್ (ಭಾಲ್ಕಿ)**:– ಮಾನ್ಯ ಸಭಾಧ್ಯಕ್ಷರೇ, ನಿನ್ನೆ ಸನ್ಮಾನ್ಯ ಅಬಕಾರಿ ಸಚಿವರು ಈ ವಿಧೇಯಕವನ್ನು ಪರಿಗಣನೆಗಾಗಿ ಮಂಡಿಸಿದಾಗ, ನಾನು ಅವರು ಕಾಕ್‌ಟೇಲ್ ಭಾಷಣವನ್ನು ಮಾಡಿದ್ದಾರೆಂದು ಭಾವಿಸಿದ್ದೇನೆ. ಮಾನ್ಯರೇ ಒಬ್ಬ ವ್ಯಕ್ತಿಯು ಕೆಲವು ಕೃತ್ಯಗಳನ್ನು ಮಾಡಬಾರದೆಂದು ಒತ್ತಾಯಿಸುವಂತಹ ಯಾವುದಾದರೂ ಸರಿಯೇ, ಇದರ ಪರಿಣಾಮ ಮಾತ್ರ ಆತನು ಅದನ್ನು ಉಲ್ಲಂಘಿಸುವ ಮಾರ್ಗ ಹಿಡಿಯುವಂತೆ ಕೆರಳಿಸುತ್ತದೆ. ಆತನು ಅಂಥ ಒತ್ತಾಯದ ವಿರುದ್ಧ ಪ್ರತಿಕ್ರಿಯಿಸುತ್ತಾನೆ. ಸರ್ವಶಕ್ತ ಭಗವಂತನೆಂಬುದಾಗಿ ಕರೆಯಲ್ಪಡುವ ಸೃಷ್ಟಿಕರ್ತನು ತಾನು

ಸೃಷ್ಟಿಸಿದಂತಹ ಆ್ಯಡಮ್‌ನನ್ನು ಕುರಿತು ಯಾವುದೋ ಒಂದು ಹಣ್ಣನ್ನು ತಿನ್ನದೆ ಹದ್ದುಬಸ್ತಿನಲ್ಲಿರುವಂತೆ ಹೇಳಿದನು. ಆದರೆ ಅವನು ಅದನ್ನು ತಿಂದುಬಿಟ್ಟನು ಮತ್ತು ಇದರಿಂದಾಗಿ, ಆತ ಭೂಮಿಗೆ ಬರಬೇಕಾಯಿತು ಎಂಬುದು ಎಲ್ಲರಿಗೂ ಗೊತ್ತಿರುವ ವಿಷಯವಾಗಿದೆ. ಈಗ ಅದೇ ರೀತಿಯ ವ್ಯಕ್ತಿಯು ನಿಮ್ಮ ನಿಯಮ ನಿಬಂಧನೆಗಳನ್ನು ಪಾಲಿಸುವರೆಂದು ನಿರೀಕ್ಷಿಸಲಾಗುವುದಿಲ್ಲ. ಅಮೆರಿಕಾ ಮತು ಇತರ ರಾಷ್ಟ್ರಗಳಲ್ಲಿ ಪಾನ ನಿರೋಧವನ್ನು ಜಾರಿಗೊಳಿಸಿರುವ ಅನುಭವವು ನಮ್ಮ ಮುಂದಿದೆ ಮತ್ತು ಅಲ್ಲಿ ಸಾಧಿಸಲಾಗಿರುವ ಫಲಿತಾಂಶಗಳು ನಮಗೆಲ್ಲರಿಗೂ ತಿಳಿದಿದೆ. ಈ ಫಲಿತಾಂಶಗಳ ಬಗ್ಗೆ ಚೆನ್ನಾಗಿ ಅರಿವಿದ್ದರೂ, ಇನ್ನೂ ಈ ಸರ್ಕಾರವು, ಇದನ್ನು ಈ ದೇಶದಲ್ಲಿ ಪರಿಶೀಲಿಸುತ್ತಿದೆ. ಇದನ್ನು ಮನಗಾಣದಿರುವುದಕ್ಕಾಗಿನ ಕಾರಣಗಳು ನನಗೆ ಗೊತ್ತಿಲ್ಲ. ಮಾನ್ಯರೆ ನಮ್ಮ ಕಾಂಗ್ರೆಸ್ ಜನರು ಈ ಎಲ್ಲಾ ಹದಿನಾಲ್ಕು ವರ್ಷಗಳಿಂದಲೂ ಕುಟುಂಬ ಯೋಜನೆಗಾಗಿ ವಕಾಲತ್ತು ವಹಿಸುತ್ತಿದ್ದು, ಅವರು ಎಲ್ಲಾ ಪ್ರಯತ್ನಗಳನ್ನು ಮಾಡಿದ್ದರೂ ಜನಸಂಖ್ಯೆ ಮಾತ್ರ ಹೆಚ್ಚುತ್ತಲೇ ಇದೆ.

**ಶ್ರೀ ಕೆ.ಎಸ್. ಸೂರ್ಯನಾರಾಯಣ ರಾವ್:–** ಆದರೆ ಅವರಿಗೆ ಅದು ಇನ್ನೂ ಹೆಚ್ಚಾಗಬೇಕಾಗಿದೆ.

**ಶ್ರೀ ಬಿ. ಶ್ಯಾಮಸುಂದರ್:–** ಹೌದು, ನಿಮಗೆ ಜನರ ಆರೋಗ್ಯವನ್ನು ಸುಧಾರಿಸಲು ಪಾನನಿರೋಧವನ್ನು ಜಾರಿಗೆ ತರುವುದು ಬೇಕಾಗಿದೆ. ಆದರೆ, ಪಾನ ನಿರೋಧವನ್ನು ಜಾರಿಗೊಳಿಸಿರುವೆಡೆಯಲ್ಲೆಲ್ಲ ಭಾರತದಾದ್ಯಂತ ವರದಿಗಳನ್ನು ನೀವು ನೋಡಿ. ಅಲ್ಲಿನ ಜನರು ವಿವಿಧ ರೀತಿಯ ಖಾಯಿಲೆಗಳಿಂದ ನರಳುತ್ತಿದ್ದಾರೆ. ಅಂಥ ಪ್ರದೇಶಗಳಲ್ಲಿ ಅವರು ಕಳ್ಳಭಟ್ಟಿಯಿಂದ ತಯಾರಿಸಿದ ಸಾರಾಯಿಯನ್ನು ಕುಡಿದಿರುವ ಕಾರಣದಿಂದಾಗಿ ಕ್ಷಯರೋಗವು ಮಿತಿಮೀರಿದೆ. ಮಾನ್ಯರೆ, ಇದು ಮನುಷ್ಯ ಸ್ವಭಾವ ಮತ್ತು ಕೆಲವು ಮಂದಿ ಮದಿರೆ ಮತ್ತು ಮಾನಿನಿಯರ ಸಹವಾಸ ಬಯಸುತ್ತಾರೆ. ದೇವತೆಗಳೂ ಕೂಡ ಕುಡಿಯುತ್ತಿದ್ದರೆಂದು ನಾವು ಪುರಾಣಗಳಲ್ಲಿ ಓದಿದ್ದೇವೆ. ಒಂದು ದಿವಸ ಬ್ರಹ್ಮನು ಕೂಡ ಮಿತಿಮೀರಿ ಕುಡಿದು ತುಂಬಾ ಅಮಲೇರಿ, ಆತ ತನ್ನ ಸ್ವಂತ ಮಗಳ ಬೆನ್ನಟ್ಟಿಬಿಟ್ಟನಂತೆ; ಇದೆಲ್ಲವು ನಿಜವೇ ಎಂಬುದು ನನಗೆ ಗೊತ್ತಿಲ್ಲ. ಆದರೆ ಇದನ್ನು ಪುರಾಣದಲ್ಲಿ ಹೇಳಲಾಗಿದೆ.

(ನಗು)

ಇನ್ನೊಂದು ಉದಾಹರಣೆ ಕೊಡಿ

**ಶ್ರೀ ಸಿ.ಎಂ. ಆರ್ಮುಗಂ:–** ನಾನು ಕ್ರಿಯಾಲೋಪ ಎತ್ತುತ್ತೇನೆ. ಮಾನ್ಯರೇ, ಈ ಸದನದಲ್ಲಿ ತಮ್ಮನ್ನು ಸಮರ್ಥಿಸಿಕೊಳ್ಳಲು ಇಲ್ಲಿ ಇರದಿರುವ ಸದಸ್ಯರ ಬಗ್ಗೆ ಇಲ್ಲಿ ಉದಾಹರಿಸಕೂಡದು ಹಾಗೂ ಪ್ರಸ್ತಾಪಿಸಬಾರದು ಎಂಬುದು ಈ ಸದನದಲ್ಲಿನ ಸುಸ್ಥಾಪಿತವಾದ ಸಂಪ್ರದಾಯವಾಗಿದೆ. ಆದ್ದರಿಂದ, ಬ್ರಹ್ಮನು ಇಲ್ಲದಿದ್ದು ಇದರಿಂದಾಗಿ ಆತನ ಬಗ್ಗೆ ಇಲ್ಲಿ ಪ್ರಸ್ತಾಪಿಸಬಾರದು;

ಸದನದ ಸದಸ್ಯನಾಗಿಲ್ಲದಿರುವ ಮತ್ತು ತನ್ನನ್ನು ಸ್ವತಃ ಸಮರ್ಥಿಸಿಕೊಳ್ಳಲು ಸಾಧ್ಯವಿಲ್ಲದಿರುವ ವ್ಯಕ್ತಿಯ ಬಗ್ಗೆ ಪ್ರಸ್ತಾಪ ಮಾಡುವಲ್ಲಿ ಮಾನ್ಯ ಸದಸ್ಯರು ಕ್ರಮವಾಗಿರುವರೇ?

(ನಗು)

**ಮಾನ್ಯ ಸಭಾಪತಿಯವರು:–** ಇದರಲ್ಲಿ ಯಾವುದೇ ಕ್ರಿಯಾಲೋಪವಿರುವುದಿಲ್ಲ.

**ಶ್ರೀ ಬಿ. ಶ್ಯಾಮಸುಂದರ್:–** ಮಾನ್ಯರೇ, ಪ್ರಪಂಚದಲ್ಲಿನ ಬಹುತೇಕ ಎಲ್ಲಾ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಪ್ರಕರಣವನ್ನು ನಾನು ಪ್ರಸ್ತಾಪಿಸುತ್ತಿದ್ದೇನೆ. ಫ್ರಾನ್ಸ್‌ನಲ್ಲಿ, ಕೆಲವು ಛಾಯಾಚಿತ್ರಗಳ ವಿರುದ್ಧ ಮೊಕದ್ದಮೆಯನ್ನು ಹೂಡಲಾಗಿತ್ತು ಮತ್ತು ಕೆಲವು ಹುಡುಗರ ವಿರುದ್ಧ ಕ್ರಮ ಜರುಗಿಸಲಾಗಿತ್ತು. ಏಕೆಂದರೆ ಅವರು ಆ ಛಾಯಾಚಿತ್ರಗಳನ್ನು ಮಾರಾಟ ಮಾಡುತ್ತಿದ್ದು, ಅವುಗಳು ನಗ್ನರಾದ ಸ್ತ್ರೀಯರ ಛಾಯಾಚಿತ್ರಗಳಾಗಿದ್ದವು. ಸರ್ಕಾರವು ಅವರನ್ನು ಕಾನೂನು ಪ್ರಕಾರ ಶಿಕ್ಷಿಸಲು ಅಪೇಕ್ಷಿಸಿತು. ನ್ಯಾಯಾಲಯವು ಛಾಯಾಚಿತ್ರಗಳು ನಿಷೇಧಿಸಲ್ಪಡಬೇಕಾದಂತವುಗಳು ಆಗಿದ್ದರೆ ಫ್ರಾನ್ಸ್‌ನಲ್ಲಿ ಕಂಡುಬರುವ ಬಹುತೇಕ ಎಲ್ಲ ಛಾಯಾಚಿತ್ರಗಳನ್ನೂ ನಿಷೇಧಿಸಬೇಕಾಗುತ್ತದೆ ಎಂಬುದಾಗಿ ಅಭಿಪ್ರಾಯಪಟ್ಟಿತು. ಆದ್ದರಿಂದ, ಜನರ ಅಭ್ಯಾಸಗಳ ಸಂಬಂಧವಾಗಿ ಕಾನೂನಿನ ಹಸ್ತಕ್ಷೇಪ ಮಾಡುವಂತಿಲ್ಲ. ನೀವು ನನಗೆ ಇದನ್ನು ಮಾಡಿ ಮತ್ತು ಅದನ್ನು ಮಾಡಿ ಎಂದು ಹೇಳುವಂತಿಲ್ಲ. ಮಾನ್ಯರೆ, ತನ್ನ ಕೈಯಲ್ಲಿ ಮದಿರೆಯ ಬಟ್ಟಲನ್ನು ಹಿಡಿದುಕೊಂಡು ಮತ್ತು ಆತನ ಮುಂದೆ ಓರ್ವ ಕುಮಾರಿಯು ಮರದ ಕೆಳಗೆ ಕುಳಿತಿರುವ ಉಮರ್ ಖಯಾಮ್‌ನ ಸುಂದರವಾದ ಛಾಯಾಚಿತ್ರಗಳು ನನ್ನ ನೆನಪಿಗೆ ಬರುತ್ತಿದೆ. ಆತ ಹೇಳುತ್ತಾನೆ: 'ನಿನ್ನೊಂದಿಗೆ ಮತ್ತು ಮದಿರೆಯ ಬಟ್ಟಲಿನೊಂದಿಗೆ ಇರುವಾಗ ಬೇರಾವುದೇ ಚಿಂತೆಯೂ ನನ್ನನ್ನು ಕಾಡುವುದಿಲ್ಲ'. ಹೀಗಿರುವಾಗ ನೀವು ಅದನ್ನು ಹೇಗೆ ನಿಷೇಧಿಸುವಿರಿ? ಅನಂಗರಂಗ ಎಂಬ ಪುಸ್ತಕವೊಂದಿದೆ. ಇದರಲ್ಲಿ ಎಲ್ಲಾ ಇಂತಹ ವಿಷಯಗಳೇ ತುಂಬಿದ್ದು ಮಾನ್ಯರೆ, ನೀವು ನನಗೆ ಅನುಮತಿ ನೀಡಿದರೆ ನಾನು ಮದ್ಯಪಾನ ಮಾಡುವ ತುಂಬಾ ದೊಡ್ಡ ವ್ಯಕ್ತಿಗಳ ಮತ್ತು ಕೆಲವು ಮಂತ್ರಿಗಳ ಹೆಸರುಗಳನ್ನು ಹೇಳುತ್ತೇನೆ; ಆದರೆ ನನಗೆ ಗೊತ್ತು, ಹಾಗೆ ಮಾಡಲು ನೀವು ನನಗೆ ಅನುಮತಿ ನೀಡುವುದಿಲ್ಲ. ಆದುದರಿಂದ, ನಾನು ಅವರನ್ನು ಇಲ್ಲಿ ಹೆಸರಿಸುವುದಿಲ್ಲ. ಮಾನ್ಯರೆ, 'ನರ್ತನಿ ಮಹಾತ್ಮೆ' ಎಂದು ಕರೆಯಲ್ಪಡುವ ಇನ್ನೊಂದು ಪುಸ್ತಕವಿದೆ. ಇದು ಮದಿರೆ ಮತ್ತು ಮಾನಿನಿಯರನ್ನು ಕುರಿತ ಒಂದು ಸುಂದರವಾದ ಪುಸ್ತಕವಾಗಿದೆ. ಇದರಲ್ಲಿ, ಒಬ್ಬ ವ್ಯಕ್ತಿಯನ್ನು ಇವುಗಳ ಮೂಲಕ ಹೇಗೆ ದೇವರ ಸಮೀಪಕ್ಕೆ ಕರೆದೊಯ್ಯಬಹುದಾಗಿರುತ್ತದೆ ಎಂಬುದನ್ನು ವಿವರಿಸಿರುತ್ತವೆ. (ನಗು) ಮಾನ್ಯರೇ, ಹಿಂದೂ ಧರ್ಮದಲ್ಲಿ ಚಾರ್ವಾಕರೆಂದು ಕರೆಯಲ್ಪಡುವ ಒಂದು ಪಂಥವಿದೆ. ಅವರ ಆರಾಧನೆಯಲ್ಲಿ; ಅವರು ಮದ್ಯವನ್ನು ಬಳಸಬೇಕು. ಅಂದರೆ, ನೀವು ಮನುಷ್ಯನ ಭಾವನೆಗಳು ಮತ್ತು ಮನುಷ್ಯ ಸ್ವಾತಂತ್ರ್ಯದ ಬಗ್ಗೆ ಅನಗತ್ಯವಾಗಿ ಹಸ್ತಕ್ಷೇಪ ಮಾಡುತ್ತಿದ್ದೀರಿ. ಸರ್ಕಾರದಲ್ಲಿರುವಂತಹ ವ್ಯಕ್ತಿಗಳು ಸಂವಿಧಾನವನ್ನು ಅರ್ಥ ಮಾಡಿಕೊಂಡಿದ್ದಾರೆಯೋ ಎಂಬುದು ನನಗೆ ಗೊತ್ತಿಲ್ಲ. ವಿಧೇಯಕದ 6ನೇ ಖಂಡದಲ್ಲಿ, ಮಾದಕ

ವಸ್ತುಗಳಿಗೆ ಸಂಬಂಧಿಸಿದ ಜಾಹೀರಾತುಗಳನ್ನು ಮುದ್ರಣ ಮಾಡಿದ್ದಕ್ಕಾಗಿ ಅಥವಾ ಪ್ರಕಟಣೆ ಮಾಡಿದ್ದಕ್ಕಾಗಿ ಅಥವಾ ಅಂಥ ಜಾಹೀರಾತುಗಳನ್ನು ಒಳಗೊಂಡಿರುವ ವೃತ್ತಪತ್ರಿಕೆ ಇತ್ಯಾದಿಗಳನ್ನು ಪ್ರಸಾರ ಮಾಡಿದ್ದಕ್ಕಾಗಿ ಅಂತಹ ಜನರನ್ನು ಶಿಕ್ಷಿಸಲಾಗುವುದೆಂದು ಹೇಳಿರುತ್ತದೆ. ಮಾನ್ಯರೇ ಉಮರ್ ಖಯಾಮ್‌ನ ಉಮರನ ಒಸಗೆಯಲ್ಲಿ ಸುಂದರವಾದ ಕವನಗಳಿವೆ.

ಇದರಲ್ಲಿ; 'ಓ! ನನ್ನ ಪ್ರೇಯಸಿಯೆ! ನಾನು ಮದ್ಯಪಾನ ಮಾಡುವಂತೆ ನೀನು ಬಯಸಿದರೆ, ನನ್ನ ಸನಿಹಕೆ ಬಾ. ನೀನು ಮದಿರೆಯ ಬಟ್ಟಲನ್ನು ನನಗೆ ನೀಡಬಯಸಿದರೆ, ನನ್ನ ನೋಟದಲ್ಲಿ ನಿನ್ನ ಕಣ್ಣ ನೋಟವನ್ನು ಒಂದಾಗಿಸು".

ಆದ್ದರಿಂದ ಹಲವು ಮಂದಿ ಮದ್ಯದ ಬಗ್ಗೆ ವಿರೋಧಾಭಾಸದ ಭಾವನೆಯನ್ನು ಹೊಂದಿರುತ್ತಾರೆ. ಮಾನ್ಯರೆ, ಜನರ ಆರೋಗ್ಯವನ್ನು ಸುಧಾರಿಸಲು ಪಾನ ನಿರೋಧವನ್ನು ಜಾರಿಗೆ ತಂದಿರುವುದಾಗಿ ಹೇಳಲಾಗಿದೆ. ಇದಕ್ಕೆ ಯಾವುದೇ ಆಧಾರವಿಲ್ಲ. ಇನ್ನೊಂದು ರೀತಿಯಾಗಿ ಕಳ್ಳಭಟ್ಟಿಯಿಂದ ತಯಾರಿಸಿದ ಸಾರಾಯಿಯನ್ನು ಕುಡಿಯುವ ಮೂಲಕ ಹೆಚ್ಚು ಜನರು ಸಾಯುತ್ತಿದ್ದಾರೆ. ನನ್ನ ಕಾಂಗ್ರೆಸ್ ಮಿತ್ರರು ಇದರ ಪರಿಣಾಮಗಳನ್ನು ಮತ್ತು ಮಾನವನ ಸ್ವಾತಂತ್ರ್ಯದ ಬಗ್ಗೆ ಹೇಗೆ ಹಸ್ತಕ್ಷೇಪ ಮಾಡಲಾಗುತ್ತಿದೆ ಎಂಬುದನ್ನು ಅರ್ಥಮಾಡಿಕೊಳ್ಳಬೇಕಾಗಿ ನಾನು ಬಯಸುತ್ತೇನೆ. ಒಟ್ಟಾರೆ ಅಮೇರಿಕಾ ಇದರಲ್ಲಿ ವಿಫಲವಾಗಿರುವಾಗ, ನಾವೇಕೆ ಜನರ ಸ್ವಾತಂತ್ರ್ಯದ ಬಗ್ಗೆ ಹಸ್ತಕ್ಷೇಪ ಮಾಡುತ್ತಿದ್ದೇವೆ. ಪಾನ ನಿರೋಧದ ವಿಷಯದಲ್ಲಿ ಭಾರಿ ನಿಷ್ಣಾತರಲ್ಲಿ ಒಬ್ಬರಾದ ಜಾರ್ಜ್ ಲಿಂಡ್ಸೆ, ನಿಷೇಧದ ಬಗ್ಗೆ ಬಹಳಷ್ಟು ಬರೆದಿದ್ದಾರೆ. ಅಂತಿಮವಾಗಿ, ಇದನ್ನು ಒತ್ತಾಯ ಮಾಡಕೂಡದು ಎಂಬ ತೀರ್ಮಾನಕ್ಕೆ ಬರುತ್ತಾರೆ. ಭಾರತದಲ್ಲಿ 44 ಕೋಟಿ ಜನರಿದ್ದು, ನಮ್ಮಲ್ಲಿ ಎಷ್ಟು ಮಂದಿ ಮದ್ಯಪಾನ ಮಾಡುತ್ತಾರೆ. ಎಂಬುದನ್ನು ನೀವು ಹೇಳಬಲ್ಲಿರಾ? ಬಹಳ ಕಡಿಮೆ. ಬಹಳ ಕಡಿಮೆ ಜನರು ಮದ್ಯಪಾನ ಮಾಡುತ್ತಾರೆ. ಮಾನ್ಯರೆ ನಿಮಗೆ ನಾನು ಇದನ್ನು ಸಾಬೀತುಪಡಿಸಿ ಹೇಳುವುದಾದರೆ, ನಾನು ಪ್ಯಾರಿಸ್ಸಿಗೆ ಹೋಗಿದ್ದೆ, ಬಹುಮಟ್ಟಿಗೆ ಪ್ರತಿಯೊಬ್ಬ ಹುಡುಗ ಮತ್ತು ಹುಡುಗಿ ಮದ್ಯಪಾನ ಮಾಡುವುದನ್ನು ನಾನು ನೋಡಿದ್ದೇನೆ. ಅವರು ದಷ್ಟಪುಷ್ಟವಾಗಿದ್ದು ಆರೋಗ್ಯದಿಂದಿದ್ದಾರೆ. ಅವರು ಆಕರ್ಷಕವಾದ ಮೈಕಟ್ಟುಳ್ಳವರಾಗಿದ್ದಾರೆ! ದೂರದಿಂದಲೂ ಕೂಡ, ಇವರನ್ನು ನೀವು ನೋಡಿದರೆ ಆಕರ್ಷಿತರಾಗುತ್ತೀರಿ. ಆದರೆ ಇಲ್ಲಿ ನೀವು ಯಾವುದೇ ಆಕರ್ಷಣೆ ಅಥವಾ ಆರೋಗ್ಯದಿಂದಿರದ ಕುಳ್ಳಗಿನ, ಕಪ್ಪಾದ ಜನರನ್ನೂ ನೋಡುವಿರಿ. ಆರೋಗ್ಯವು ಕೆಟ್ಟು ಹೋಗಿದೆ ಮತ್ತು ನೀವು ಅವರು ಇನ್ನಷ್ಟು ಭಸ್ಮವಾಗಿ ನಿರ್ನಾಮವಾಗುವಂತೆ ನೋಡಲು ಬಯಸುತ್ತೀರಿ! ಅದು ಎಷ್ಟು ಪ್ರಮಾಣದಲ್ಲಿ? ಯುರೋಪಿನಲ್ಲಿ ಶೇ. 99.9ರಷ್ಟು ಜನರು ಮದ್ಯಪಾನಮಾಡುತ್ತಾರೆ.

**ಶ್ರೀ ಜೆ.ಬಿ. ಮಲ್ಲಾರಾಧ್ಯ:-** ಭಾರತದಲ್ಲಿನ ಜನರು, ವಿಶೇಷತಃ ಮಹಿಳೆಯರು ಪ್ರಣಯ ಪ್ರಧಾನ ಪ್ರೇರಣೆಯನ್ನು ಉಂಟು ಮಾಡುವುದಿಲ್ಲವೆಂಬುದಾಗಿ ನನ್ನ ಮಿತ್ರರಾದ ಶ್ರೀ ಶ್ಯಾಮ ಸುಂದರ್‌ರವರ ಮನಸ್ಸಿಗೆ ತೋಚಿದೆಯೇ? ಅಥವಾ ಹೇಳುತ್ತಿರುವುದಾರೂ ಏನನ್ನು? ಇದು ನನಗೆ ಸ್ವಲ್ಪಮಟ್ಟಿಗೂ ಅರ್ಥವಾಗುತ್ತಿಲ್ಲ!

**ಶ್ರೀ ಬಿ. ಶ್ಯಾಮಸುಂದರ್:–** (ಉರ್ದುವಿನಲ್ಲಿ ಮಾತನಾಡಿರುತ್ತಾರೆ)

ಮಾನ್ಯರೆ, ಇದು ತುಂಬಾ ಕಷ್ಟ, ಮದಿರೆ ಮತ್ತು ಮಾನಿನಿಯರನ್ನು ಅರ್ಥಮಾಡಿಕೊಳ್ಳುವುದು ಬಲುಕಷ್ಟ. ನಿಜವಾಗಿಯೂ ತುಂಬಾ ಕಷ್ಟ. ನೀವು ಇದರ ಬಗ್ಗೆ ಪ್ರಯತ್ನಿಸಿಲ್ಲದಿರಬಹುದು.

**ಶ್ರೀ ಜೆ.ಬಿ. ಮಲ್ಲಾರಾಧ್ಯ:–** ಮಾನ್ಯರೇ ನಾನು ಇವರನ್ನು ಸಮರ್ಥಿಸುತ್ತೇನೆ.

**ಶ್ರೀ ಬಿ. ಶ್ಯಾಮಸುಂದರ್:–** ಮದ್ಯಪಾನ ಮಾಡುವಂತಹವರು ತಮ್ಮ ಆರೋಗ್ಯವನ್ನು ಹಾಳು ಮಾಡಿಕೊಳ್ಳುತ್ತಾರೆ ಎಂಬುದಾಗಿ ನೀವು ಗಂಭೀರವಾಗಿ ಹೇಳುತ್ತಿರುವಿರಾ? ಇದು ತುಂಬಾ ಕೆಟ್ಟದ್ದೇ? ಖಂಡಿತವಾಗಿಯೂ ಇದು ಕೆಟ್ಟದ್ದಲ್ಲ. ಮದ್ಯಪಾನ ಮಾಡುವ ಅನೇಕ ಸ್ನೇಹಿತರು ನನಗೆ ಇದ್ದಾರೆ. ಅವರು ತುಂಬಾ ಆರೋಗ್ಯದಿಂದಿದ್ದಾರೆ. ಅವರಿಗೆ ಯಾವ ತೊಂದರೆಯೂ ಇಲ್ಲ.

**ಶ್ರೀ ಬಿ. ವೈಕುಂಠ ಬಾಳಿಗ:–** ಪ್ರಣಯದ ವಿಷಯವು ವಿಧಾನ ಮಂಡಲದ ಹೊರಗಡೆ ಮಾತನಾಡುವುದಾಗಿರುತ್ತದೆ. ಆದರೆ ಒಳಗಡೆಯಲ್ಲ ಎಂಬುದಾಗಿ ನಾನು ಭಾವಿಸಿದ್ದೇನೆ. ನನ್ನ ಸನ್ಮಾನ್ಯ ಮಿತ್ರರು ಇದನ್ನು ಸದನದ ಒಳಗಡೆ ತರಲು ಬಯಸುತ್ತಿದ್ದಾರೆ.

**ಶ್ರೀ ಜೆ.ಬಿ. ಮಲ್ಲಾರಾಧ್ಯ:–** ನನ್ನ ಮಿತ್ರರು ನಿಷೇಧದ ಪ್ರಣಯದ ಬಗ್ಗೆ ವಿವರಿಸಲು ಬಯಸಿದ್ದಾರೆ.

**ಶ್ರೀ ಬಿ. ಶ್ಯಾಮಸುಂದರ್:–** ಫ್ರಾನ್ಸ್‌ನಲ್ಲಿ, ಯೂರೋಪ್‌ನಲ್ಲಿ ಮದ್ಯಪಾನ ಮಾಡುವಂತಹವರು ತುಂಬಾ ಆರೋಗ್ಯವಾಗಿದ್ದು, ಅವರ ಆರೋಗ್ಯವು ನಮ್ಮ ಜನರ ಆರೋಗ್ಯಕ್ಕಿಂತಲೂ ಬಹಳ ಉತ್ತಮವಾಗಿರುತ್ತದೆ. ಕುಡಿತವು ಆರೋಗ್ಯವನ್ನು ಹಾಳು ಮಾಡುವುದಿಲ್ಲ.

(ಉರ್ದುವಿನಲ್ಲಿ ಮಾತನಾಡಿರುತ್ತಾರೆ)

ನೀವು ನಮ್ಮ ಜನರಿಗೆ ಒಳ್ಳೆಯ ಆರೋಗ್ಯಕರವಾದ ಊಟ, ಉತ್ತಮ ಆಹಾರವನ್ನು ಒದಗಿಸಲು ಸಾಧ್ಯವಾಗಿರದಿದ್ದು ನೀವು ಯಾವ ಯಾವುದನ್ನೋ ನಿಷೇಧಿಸುವಂತೆ ಅಪೇಕ್ಷಿಸುತ್ತೀರಿ. ಇದು ನಿಮ್ಮ ಸರ್ಕಾರದ ಬಗೆಗಿನ ನಿಮ್ಮ ನೀತಿಯು ಒಟ್ಟಾರೆ ಪ್ರಹಸನವಾಗಿರುವುದಾಗಿ ತೋರಿಸುತ್ತದೆ! ಇದು ಜನರ ಆರೋಗ್ಯವನ್ನು ಹಾಳು ಮಾಡುತ್ತದೆಯೇ. ಕುಡಿತವು ಆರೋಗ್ಯವನ್ನು ಹಾಳು ಮಾಡುವುದಿಲ್ಲ. ಹಳ್ಳಿಗಳಿಗೆ ಹೋಗಿ ನೋಡಿ – ನಾನು ಮೇಲಿಂದ ಮೇಲೆ ಉದಾಹರಣೆಗಳನ್ನು ಕೊಡಲು ಇಚ್ಛಿಸುವುದಿಲ್ಲ. ಒಬ್ಬ ಕ್ರಿಮಿನಲ್ ಇದ್ದೆಡೆ ಈಗ ಇವರು 20ರಷ್ಟು ವೃದ್ಧಿಯಾಗಿರುತ್ತಾರೆ. ನನ್ನ ಮಿತ್ರರಾದ ಶ್ರೀ ಬಿ.ಆರ್. ಸುಂತನ್‌ಕರ್ ಹೇಳಿರುವಂತೆ ಬಹಳಷ್ಟು ಮದ್ಯ ತಯಾರಿಸುವ ಕಾರ್ಖಾನೆಗಳು ಪ್ರಾರಂಭವಾಗಿರುತ್ತವೆ. ಪಾನ ನಿಷೇಧವನ್ನು ಮಾಡಲಾಗಿಲ್ಲದಿದ್ದರೆ, ಎಲ್ಲಿಯೋ ಇರುವ ಮದ್ಯ ತಯಾರಿಸುವ ಕಾರ್ಖಾನೆಯು ಒಳ್ಳೆಯ ಪದಾರ್ಥವನ್ನು ಇದು ಅಗತ್ಯವಿರುವರಿಗೆ, ಇದನ್ನು ಬಯಸುವವರಿಗೆ ಒದಗಿಸುತ್ತಿತ್ತು. ಉದಾಹರಣೆಗೆ ವಿಸ್ಕಿ ವಿಚಾರವನ್ನು ತೆಗೆದುಕೊಳ್ಳಿ. ಕುಡಿಯುವಂತಹ

ಜನರನ್ನು ನಾನೂ ನೋಡಿದ್ದೇನೆ. ಶ್ರೀ ಮಲ್ಲಾರಾಧ್ಯರು ನಮಗೆ ಹೇಳಿದಂತೆ ಮೂರು ಬಾಟಲಿನಷ್ಟು ವಿಸ್ಕಿಯನ್ನು ಕುಡಿಯುವಂತಹ ಜನರಿದ್ದಾರೆ. ಅಂದರೆ ಶ್ರೀ ಮಲ್ಲಾರಾಧ್ಯರು ಮದ್ಯಪಾನ ಮಾಡುವುದಿಲ್ಲ ಎಂಬುದು ನನ್ನ ಮಾತಿನ ಅರ್ಥ. ಇವರು 'ಇದನ್ನು ಪ್ರಸ್ತಾಪಿಸಿದ್ದಾರೆ' ಎಂದು ಮಾತ್ರ ನಾನು ಹೇಳಿದ್ದೇನೆ. ಮೂರು ಬಾಟಲಿಗಳಷ್ಟು ವಿಸ್ಕಿ ಕುಡಿಯುವ ಜನರಿದ್ದಾರೆಂದು ಅವರು ಹೇಳಿದ್ದಾರೆ. ಅವರು ಬಹಳ ಉತ್ತಮವಾದ ಆರೋಗ್ಯವನ್ನು ಕಾಪಾಡಿಕೊಂಡು ಬಂದಿದ್ದಾರೆ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:**– ನಿಮಗೆ ಇದರ ಬಗ್ಗೆ ಏನಾದರೂ ಸ್ವಂತ ಅನುಭವ ಇದೆಯೇ?

**ಶ್ರೀ ಬಿ. ಶ್ಯಾಮಸುಂದರ್:**– ಆದರೆ. ಮದ್ಯಪಾನ ಮಾಡುವ ಜನರನ್ನು ನಾನು ನೋಡಿರುವ ಅನುಭವವಿದ್ದು ಅವರು ಉತ್ತಮ ಆರೋಗ್ಯವನ್ನು ಕಾಪಾಡಿಕೊಂಡು ಬಂದಿರುತ್ತಾರೆ.

ಮಾನ್ಯರೆ, ನಾನು ಹೆಚ್ಚಾಗಿ ಹೇಳಲು ಬಯಸುವುದಿಲ್ಲ. ಈ ತೊಂದರೆಯು ಏನೆಂದರೆ, ಈ ಎಲ್ಲಾ ದೇವತೆಗಳು, ಖದ್ದರ್ ದೇವತೆಗಳು, ಸೃಷ್ಟಿಯಾದ ದೇವತೆಗಳ ಮನಸ್ಸಿನಲ್ಲಿ ಏನು ಹೊಕ್ಕಿದೆಯೋ ನನಗೆ ಗೊತ್ತಿಲ್ಲ. ಅವರು ತಮ್ಮ ಮನಸ್ಸಿಗೆ ಏನು ಬರುತ್ತದೆಯೋ ಅದನ್ನು ಆಮೂಲಾಗ್ರವಾಗಿ ಬದಲಾವಣೆ ಮಾಡಬಹುದೆಂದು ಭಾವಿಸಿದ್ದಾರೆ. ಅವರು ಅದನ್ನು ಬದಲಾಯಿಸಬಹುದು. ಪ್ರಪಂಚದಲ್ಲಿನ ಕ್ರಿಶ್ಚಿಯನ್, ಇಸ್ಲಾಂ ಎಲ್ಲಾ ಧರ್ಮಗಳಲ್ಲಿಯೂ ಕೂಡ ವಿರೋಧವಿದ್ದು ಅದರಲ್ಲಿಯೂ ಇಸ್ಲಾಂ, ಕುಡಿತದ ಕಟ್ಟಾ ವಿರೋಧಿಯಾಗಿರುತ್ತದೆ. ಒಮ್ಮೆ ಪ್ರವಾದಿಗೆ ಮದ್ಯಾಪಾನದ ವಿಷಯವು ತಿಳಿದು ಬಂದಾಗ, ಇದನ್ನು ಕಡಿಮೆ ಪ್ರಮಾಣದಲ್ಲಿ ನಿಷೇಧಿಸಿ ಆದರೆ ಸಂಪೂರ್ಣವಾಗಿ ಪಾನ ನಿಷೇದ ಇರಕೂಡದು ಎಂದು ಹೇಳಿದರು. ಕಡಿಮೆ ಪ್ರಮಾಣದಲ್ಲಿ ಪಾನ ನಿರೋಧವು ಇರುವುದನ್ನು ಅಲ್ಲಿ ಮುಂದುವರಿಸಲಾಗಿದೆ. ಪಾಕಿಸ್ತಾನದಲ್ಲಿರುವವರು ಮದ್ಯಪಾನ ಮಾಡುತ್ತಿದ್ದಾರೆ.

**ಶ್ರೀ ಡಿ. ಅಬ್ದುಲ್ ರಷೀದ್:**– ಮಾನ್ಯರೆ, ಇವರು ತಪ್ಪಾಗಿ ಹೇಳುತ್ತಿದ್ದಾರೆ. ದಯವಿಟ್ಟು ಮಾನ್ಯ ಸದಸ್ಯರು ಇದನ್ನು ಸಾಬೀತುಪಡಿಸುವರೇ?

**ಶ್ರೀ ಬಿ. ಶ್ಯಾಮಸುಂದರ್:**– ನನಗೆ ಇದು ಗೊತ್ತಿದೆ. ಒಮ್ಮೆ ಈ ವಿಷಯವನ್ನು ಪ್ರವಾದಿಯ ಗಮನಕ್ಕೆ ತರಲಾಗಿತ್ತು. ಈ ವಿಷಯಗಳು ನನಗೆ ಗೊತ್ತಿದೆ. (ಉರ್ದುವಿನಲ್ಲಿ ಮಾತನಾಡಿದ್ದಾರೆ)

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:**– ಮಾನ್ಯ ಸದಸ್ಯರು ತಮ್ಮ ಅನುಭವವನ್ನು ಮಾತ್ರ ಹೇಳುವಂತೆ ನಾನು ವಿನಂತಿಸುತ್ತೇನೆ.

**ಶ್ರೀ ಬಿ. ಶ್ಯಾಮಸುಂದರ್:**– ನಾನು ಬೇರೆಯವರ ಅನುಭವಗಳಿಂದ ಇದನ್ನು ಉದಾಹರಿಸಿದ್ದೇನೆ. ಅದನ್ನೇ ನನ್ನ ಅನುಭವವೆಂದು ತೆಗೆದುಕೊಳ್ಳಲಾಗುವುದು.

**ಶ್ರೀ ಎಸ್. ಡಿ. ಕೊತವಾಲೆ:**– ಮಾನ್ಯರೆ, ಭಾಷಣಗಳಿಗೆ ಸಮಯದ ಮಿತಿ ಇರುತ್ತದೆ.

**ಮಾನ್ಯ ಸಭಾಪತಿಯವರು:–** ಇವರಿಗೆ ಎಷ್ಟು ಸಮಯದ ಅಗತ್ಯವಿದೆ. ಇವರು ಒಂದು ಅಥವಾ ಎರಡು ವಿಷಯಗಳಲ್ಲಿ ಮುಗಿಸಲು ಅವಕಾಶ ನೀಡಲಾಗುವುದು.

**ಶ್ರೀ ಬಿ. ಶ್ಯಾಮಸುಂದರ್:–** ಮಾನ್ಯರೆ, ನಾನು ಹತ್ತು ಅಥವಾ ಹದಿನೈದು ನಿಮಿಷಗಳಲ್ಲಿ ಮುಗಿಸುತ್ತೇನೆ.

**ಶ್ರೀ ವೀರೇಂದ್ರ ಪಾಟೀಲ್:–** ಏನಾದರೂ ಕಾಲಮಿತಿಯನ್ನು ನಿಗದಿಪಡಿಸಲಾಗಿದೆಯೇ ಎಂಬುನ್ನು ನಾನು ತಿಳಿದುಕೊಳ್ಳಬಹುದೆ?

**ಮಾನ್ಯ ಸಭಾಪತಿಯವರು:–** ಹೌದು, ಇವರು ಈಗಾಗಲೇ ಕಾಲಮಿತಿಯನ್ನು ಮೀರಿದ್ದಾರೆ. ಇವರು ಒಂದು ಅಥವಾ ಎರಡು ನಿಮಿಷಗಳಲ್ಲಿ ಮುಗಿಸಲು ಅವಕಾಶ ನೀಡಲಾಗುವುದು.

**ಶ್ರೀ ಬಿ. ಶ್ಯಾಮಸುಂದರ್:–** ನಾನು ಮಾದಕ ಪಾನೀಯಗಳ ಬಗ್ಗೆ ಮಾತನಾಡುತ್ತಿದ್ದೇನೆ. ನೀವು ಈ ವಿಧೇಯಕವನ್ನು ಜಾರಿಗೆ ತರುತ್ತೀರಿ. ಆದರೆ ಇತರರ ಅನುಭವದಿಂದ ಸ್ವತಃ ನೀವು ಪ್ರಯೋಜನ ಹೊಂದಲು ಬಯಸುವುದಿಲ್ಲ. ಆದ್ದರಿಂದ ಈ ತೀರ್ಮಾನವು ಪ್ರತಿಭಟಿಸಲಾಗದಾಗಿದ್ದು, ನೀವು ಇಡೀ ಜನರ ಆರೋಗ್ಯ ಕೆಡುವುದನ್ನು ಪೂರ್ತಿಯಾಗಿ ತಡೆಯಲಾರಿರಿ. ಈಗ ನಿಮಗೆ ಆತ್ಮಸಾಕ್ಷಿ ಏನಾದರೂ ಇದ್ದರೆ, ನಿಮ್ಮ ಸ್ವಂತ ಆತ್ಮಸಾಕ್ಷಿಯಾಗಿ, ಕಾಂಗ್ರೆಸ್ ಪಕ್ಷದ ಎಷ್ಟು ಮಂದಿ ನಾಯಕರು ಮದ್ಯಪಾನ ಮಾಡುತ್ತಾರೆ ಎಂಬುದನ್ನು ನನಗೆ ಹೇಳುವಿರಾ? ಮೊದಲು ಇದನ್ನು ಹೇಳುತ್ತಿರುವುದಕ್ಕಾಗಿ ನನ್ನನ್ನು ಕ್ಷಮಿಸಿ. ಈ ಪಕ್ಷದ ಮುಖ್ಯವಾದ ವ್ಯಕ್ತಿಯೊಬ್ಬರು ಬಹುವಾಗಿ ಮದ್ಯಪಾನ ಮಾಡುತ್ತಾರೆ ಮತ್ತು ಒಳ್ಳೆಯ ಮದ್ಯವನ್ನು ಸೇವಿಸುತ್ತಾರೆ ಮತ್ತು ಇವರು ಬೇರೆಲ್ಲರಿಗಿಂತಲೂ ಉತ್ತಮವಾದ, ಬಹಳ ಉತ್ತಮವಾದ ಆರೋಗ್ಯವನ್ನು, ಅತ್ಯುತ್ತಮವಾದ ಆರೋಗ್ಯವನ್ನು ಕಾಪಾಡಿಕೊಂಡು ಬಂದಿದ್ದಾರೆ.

**ಮಾನ್ಯ ಸಭಾಪತಿಯವರು:–** ಅವರು ಹೆಸರುಗಳನ್ನು ಹೇಳಕೂಡದು.

**ಶ್ರೀ ಬಿ. ಶ್ಯಾಮಸುಂದರ್:–** ಇಲ್ಲ, ನಾನು ಹೆಸರುಗಳನ್ನು ಹೇಳಲು ಇಚ್ಛಿಸುವುದಿಲ್ಲ. ನಾನು ಹೇಳುವುದೇನೆಂದರೆ ಕೆಟ್ಟದ್ದನ್ನು ತೆಗೆದುಕೊಂಡರೆ ಹಾನಿಕರ. ನೀವು ಒಳ್ಳೆಯದನ್ನು ತೆಗೆದುಕೊಂಡಾಗ ಅದು ಹಾನಿಕರ ಎನಿಸುವುದಿಲ್ಲ. ಸಾಮಾನ್ಯ ಆಹಾರವಾದ ಅಕ್ಕಿಯನ್ನು ಅತಿಯಾಗಿ ಸೇವಿಸಿದರೆ ಅದು ಸಹ ಆರೋಗ್ಯಕ್ಕೆ ಹಾನಿಕರ. ಅದು ಹಾನಿಕರವಾದುದು. ಯಾವುದನ್ನೇ ಆಗಲಿ ಇತಿಮಿತಿಯಲ್ಲಿ ಬಳಸಿದರೆ ಅದು ಚೆನ್ನಾಗಿರುವುದು. ಯಾವುದನ್ನು ನಿಷೇಧಿಸಿದರೂ ಅದು ಅಪರಾಧವಾಗಬಾರದು ಅಥವಾ ಪಾಪವಾಗ ಬಾರದು. ಈ ಕಾರಣಕ್ಕಾಗಿ ಈ ಮಸೂದೆಯನ್ನು ನಾನು ವಿರೋಧಿಸುತ್ತೇನೆ. ಮತ್ತು ಈ ನಿಟ್ಟಿನಲ್ಲಿ ನಾವು ಶಿಕ್ಷಣವನ್ನು ಪ್ರಾರಂಭಿಸಬೇಕೆಂದು ಈ ಸದನವನ್ನು ಮಾತ್ರವಲ್ಲ ಮಂತ್ರಿಗಳಿಗೂ ಸಹ ಮನವಿ ಮಾಡುತ್ತಿದ್ದೇನೆ. ಈ ಕಾಂಗ್ರೆಸ್ಸಿಗರು, ಅವರ ಸ್ವಂತ ತತ್ವಗಳಿಗೇ ಅವರೆಷ್ಟು ಸಿದ್ಧರಾಗಿದ್ದಾರೋ ಎಂದು ನನಗೆ ಗೊತ್ತಿಲ್ಲ. ಅವರ ಈ ತೋರ್ಪಡಿಕೆ ಮನೋಧರ್ಮವೇ ಇಡೀ

ದೇಶವನ್ನು ಹಾಳುಮಾಡುತ್ತಿದೆ. ಈ ತೋರ್ಪಡಿಕೆ ಮನೋಧರ್ಮಕ್ಕೆ ಕೂಡಲೇ ಕಡಿವಾಣ ಹಾಕಬೇಕು. ಇಲ್ಲದಿದ್ದರೆ, ಅವರ ಮಿತಿಮೀರಿದ ಉತ್ಸಾಹ ಇಡೀ ದೇಶವನ್ನೆ ಹಾಳು ಮಾಡಬಿಡಬಹುದು. ಧನ್ಯವಾದಗಳು ಸ್ವಾಮಿ.

**ಶ್ರೀ ಎಸ್.ಡಿ. ಕೊತವಾಲೆ (ಚಿಕ್ಕೋಡಿ):**– ಸನ್ಮಾನ್ಯ ಸಭಾಧ್ಯಕ್ಷರೇ, ಅತ್ಯಂತ ಪ್ರಮುಖವಾದ ಈ ಕ್ರಮವನ್ನು ನಾನು ಬಲವಾಗಿ ಬೆಂಬಲಿಸುತ್ತೇನೆ. ಕೆಲವು ವರ್ಷಗಳ ಕಾಲ ಈ ಪಾನನಿಷೇಧ ಕಾನೂನು ಜಾರಿಯಲ್ಲಿತ್ತು. ಈ ವಿಧಾನಮಂಡಲ ಮತ್ತು ದೇಶದಲ್ಲಿನ ಇತರ ವಿಧಾನಮಂಡಲಗಳು ಪಾನನಿಷೇಧ ನೀತಿಯ ಸಾಧಕ ಬಾಧಕಗಳನ್ನು ಪರಿಗಣಿಸಿದ ನಂತರವೇ ಈ ಕ್ರಮಗಳನ್ನು ಅಂಗೀಕರಿಸಿದ್ದವು. ಈ ವಿಷಯಕ್ಕೆ ಸಂಬಂಧಪಟ್ಟ ಕಾನೂನನ್ನು ಕ್ರೋಢೀಕರಿಸಿ ಏಕರೂಪತೆಯನ್ನು ತರುವ ಉದ್ದೇಶ ಈ ಪ್ರಸಕ್ತ ವಿಧೇಯಕದ್ದಾಗಿದೆ. ಕೆಲವು ಗೌರವಾನ್ವಿತ ಪ್ರತಿ ಸದಸ್ಯರು ಮಾಡಿದಂತೆ ಸಮಸ್ಯೆಯ ಮೂಲರೂಪಗಳಿಗೆ ಹೋಗುವ ಅವಶ್ಯಕತೆ ಇಲ್ಲ. ಆದರೆ ಅವರು ಈಗಾಗಲೇ ಪ್ರಸ್ತಾಪಿಸಿರುವುದರಿಂದ, ಅವರ ವಾದಗಳಿಗೆ ಸಂಬಂಧಿಸಿದಂತೆ ಕೆಲವು ಮಾತುಗಳನ್ನು ಹೇಳಲು ಇಚ್ಛಿಸುತ್ತೇನೆ. ಪಾನನಿಷೇಧ ವಿಷಯವನ್ನು ಎರಡು ಭಾಗಗಳಾಗಿ ವಿಂಗಡಿಸಬಹುದಾಗಿದೆ. ಎಂದರೆ, ಪಾನನಿಷೇಧದ ನೀತಿ ಮತ್ತು ಪಾನನಿಷೇಧದ ಜಾರಿ. ಇವುಗಳನ್ನು ಅನುಕೂಲತೆಯ ಉದ್ದೇಶಕ್ಕೆ ಪ್ರತ್ಯೇಕವಾಗಿ ಪರಿಗಣಿಸಬೇಕು. ಇಲ್ಲಿಯವರೆವಿಗೂ ಮಾಡಿದ ಭಾಷಣಗಳಿಂದ ನನಗೆ ವ್ಯಕ್ತವಾಗುವುದೇನೆಂದರೆ ವಿಶೇಷವಾಗಿ ಪ್ರತಿಪಕ್ಷದ ಯಾವೊಬ್ಬ ಸದಸ್ಯರೂ ಪಾನನಿಷೇಧ ನೀತಿಯನ್ನು ವಿರೋಧಿಸಿಲ್ಲ. ಸನ್ಮಾನ್ಯ ಸದಸ್ಯರಾದ ಶ್ರೀ ನರಸಿಂಹನ್‌ರವರು ಮಾತನಾಡುತ್ತಿರುವಾಗ ಈ ಅಂಶವನ್ನು ಎತ್ತಿ ತಾತ್ವಿಕವಾಗಿ ಅವರು ಪಾನನಿಷೇಧವನ್ನು ವಿರೋಧಿಸುತ್ತಾರೆಯೇ ಎಂದು ಕೇಳಿದ್ದೆ. ಅದನ್ನು ವಿರೋಧಿಸುತ್ತೇನೆಂದು ಅವರು ಹೇಳಿಲ್ಲ. ಆದರೆ, ಅವರ ದೃಷ್ಟಿಯಲ್ಲಿ ಪಾನ ನಿಷೇಧ ಜಾರಿ ವಿಫಲವಾಗಿದೆ ಎನ್ನುವುದನ್ನು ತೋರಿಸಲು ವಾದ ಮಂಡಿಸಿದ್ದಾರೆ. ಶ್ರೀ ಶ್ಯಾಮಸುಂದರ್ ರವರನ್ನು ಹೊರತು ಪಡಿಸಿ ಮಾತನಾಡಿರುವಂತೆ ಇತರ ಎಲ್ಲಾ ಪ್ರತಿಪಕ್ಷದ ಸದಸ್ಯರ ವಾದವೂ ಇದೇ ಆಗಿದೆ. ಸನ್ಮಾನ್ಯ ಸದಸ್ಯರಾದ ಶ್ರೀ ಶ್ಯಾಮಸುಂದರ್‌ರವರು ಕುಡಿದ ಹರ್ಷೋನ್ಮಾದವನ್ನು ಬಣ್ಣಿಸಲು ಪ್ರಯತ್ನಪಟ್ಟರು. ಅವರು ಏನು ಅರ್ಥೈಸಿಕೊಂಡಿದ್ದಾರೆಂದು ನನಗೆ ಗೊತ್ತಿಲ್ಲ. ಆದರೆ, ಬಹುಶಃ ಅದರ ಅನುಭವ ಅವರಿಗಿದೆ ಎಂಬುವುದಂತೂ ವ್ಯಕ್ತವಾಗುವುದು. ಅದು ಅವರಿಗೆ ಬಿಟ್ಟ ವಿಷಯ. ಅದರ ಬಗ್ಗೆ ನನಗೆ ಹೆಚ್ಚಿನ ಆಸಕ್ತಿಯಿಲ್ಲ.

**ಶ್ರೀ ಜೆ.ಟಿ. ಮಲ್ಲಾರಾಧ್ಯ:**– ಹೊಂದಾಣಿಕೆಯಾಗಿ, ಈ ಸದನದ ಅನುಮತಿಯೊಂದಿಗೆ ಮಾನ್ಯ ಸಚಿವರಲ್ಲಿ ಸೂಚಿಸುವುದೇನೆಂದರೆ ಅವರು "ಅಥವಾ ಧಾರ್ಮಿಕ ಮತ್ತು ಧರ್ಮಾರ್ಥ ಅಥವಾ ಇತರ ಸಂಸ್ಥೆಗಳು" ಎನ್ನುವ ದರಗಳನ್ನು ಕೈಬಿಡುವುದಾದರೆ ನಾನು ಈ ತಿದ್ದುಪಡಿಯನ್ನು ಒಪ್ಪುತ್ತೇನೆ.

**ಶ್ರೀ ಎಂ.ಸಿ. ನರಸಿಂಹನ್:**– ಮಾನ್ಯ ಅಧ್ಯಕ್ಷರೆ, ನಾನು ಕ್ರಯಾಲೋಪ ಎತ್ತುತ್ತಿದ್ದೇನೆ. ಈ ವಿವರಣೆಯು ಸ್ವಂತ ಸಾಗುವಳಿ ವಿವರಣೆಯನ್ನೇ ಅನುಸರಿಸಿದೆ ಎಂದು ಸ್ವಲ್ಪ ಸಮಯದ ಹಿಂದೆ ಶ್ರೀ ರಾಮಪ್ಪನವರು ಹೇಳಿದರು ಎನ್ನುವ ಬಗ್ಗೆ ಮಾನ್ಯ ಅಧ್ಯಕ್ಷರಿಂದ ತಿಳಿಯಲು ಇಚ್ಛಿಸುತ್ತೇನೆ. ಇದು ಅನವಶ್ಯಕ ಮತ್ತು ಅತಿಯಾದುದು ಎಂದು ಸ್ಪಷ್ಟವಾಗಿ ಈಗ ಅರ್ಥವಾಗುತ್ತದೆ. ಕಾರ್ಯವಿಧಾನ ನಿಯಮಗಳು ಅಥವಾ ಸಂಪ್ರದಾಯಗಳ ಮೇರೆಗೆ ಕೇವಲ ಸ್ಪಷ್ಟೀಕರಣ ರೂಪದಲ್ಲಿರುವಂಥ ತಿದ್ದುಪಡಿಗೆ ತಾವು ಅವಕಾಶ ನೀಡುತ್ತೀರಾ? ಇದು ಸ್ಪಷ್ಟೀಕರಣ ತಿದ್ದುಪಡಿಯಲ್ಲವೆಂದು ನಿಮ್ಮ ಹೇಳಿಕೆಯಿಂದ ಸ್ಪಷ್ಟವಾಗುತ್ತದೆ. ಇದರ ಅಗತ್ಯತೆ ಮತ್ತು ಅವಶ್ಯಕತೆ ಇಲ್ಲ ಎನ್ನುವುದನ್ನು ಮಾನ್ಯ ಸದಸ್ಯರು ತೋರಿಸಿರುತ್ತಾರೆ. ಸದನದ ಗೌರವವನ್ನು ಕಾಪಾಡುವ ದೃಷ್ಟಿಯಿಂದಲಾದರೂ ಇರುವ ತಿದ್ದುಪಡಿಗೆ ತಾವು ಅವಕಾಶ ನೀಡುತ್ತೀರಾ?

**ಮಾನ್ಯ ಸಭಾಧ್ಯಕ್ಷರು:**– ಈ ವಿವರಣೆಯ ಸಂಖ್ಯೆ 3ನೇ ವಿವರಣೆಯಂತಿದೆ. ನಿರ್ದಿಷ್ಟ ರೂಪದಲ್ಲಿಯೇ ಬಂದಿದೆ. ಸಾಮಾನ್ಯ ರೂಪದಲ್ಲಿ ಇದು ಬಂದಿಲ್ಲ. ಅದನ್ನು ವೈಯಕ್ತಿಕವಾಗಿ ಸಾಗುವಳಿ ಮಾಡುವುದು ಎಂದರೇನು ಎನ್ನುವುದನ್ನು ಇದು ವಿವರಿಸುವುದು ವೇದ್ಯವಿದೆ.

**ಶ್ರೀ ಜಿ. ವೆಂಕಟಗೌಡ:**– 11ನೇ ವಿಷಯ ಸ್ವಯಂ ವೇದ್ಯವಿದೆ. ಈ ವಿವರಣೆ ಅಗತ್ಯವಿಲ್ಲ ಸಭಾಧ್ಯಕ್ಷರೇ,

**ಮಾನ್ಯ ಸಭಾಧ್ಯಕ್ಷರು:**– ಇದು ಸ್ವಂತ ಸಾಗುವಳಿ ಎಂದರೆ ಏನು ಎನ್ನುವುದನ್ನು ವಿವರಿಸುವುದು. ವಿವರಣೆಯಾಗಿ ಅದನ್ನು ನೀಡಲಾಗಿದೆ.

**ಶ್ರೀ ಕಡಿದಾಳ ಮಂಜಪ್ಪ:**– ಮಾನ್ಯರೆ, ಈ ವಿಧೇಯಕವು ಸಂಘ–ಸಂಸ್ಥೆಗಳು, ಕಂಪನಿಗಳು, ಸಹಕಾರಿ ಸಂಘಗಳು ಅಥವಾ ಧಾರ್ಮಿಕ ಸಂಸ್ಥೆಗಳೂ ಒಳಗೊಂಡಂಥ ವ್ಯಕ್ತಿಗಳ ಮೂಲಕ ನಡೆಯುವ ಸಾಗುವಳಿಯನ್ನು ನಿಷೇಧಿಸುತ್ತಿಲ್ಲ ಮತ್ತು ಈ ಸಂಸ್ಥೆಗಳು ಅಥವಾ ನಿಕಾಯಗಳು, ಜಮೀನುಗಳ ಹಿಡುವಳಿ ಹೊಂದಿದಲ್ಲಿ ಅವುಗಳನ್ನು ನಿಷೇಧಿಸುತ್ತಿಲ್ಲ. ಈ ವಿಧೇಯಕದ ಉಪಬಂಧಗಳ ಅನುಸಾರ, ಈ ನಿಕಾಯಗಳು ಜಮೀನುಗಳ ಹಿಡುವಳಿಯನ್ನು ಹೊಂದಬೇಕಾದಲ್ಲಿ ಜಮೀನುಗಳ ಒಡೆತನ ಪಡೆದಿರುವ ಅಥವಾ ಹಿಡುವಳಿ ಹೊಂದಿರುವ ಕಂಪನಿಗಳನ್ನು, ಹಿಡುವಳಿಗಳನ್ನು ಪಡೆದು ಸಾಗುವಳಿ

ಮಾಡುತ್ತಿರುವ ಸಹಕಾರಿ ಕ್ಷೇತ್ರದ ಜಮೀನುಗಳನ್ನು ನಮ್ಮ ಗಮನಕ್ಕೆ ತರಬೇಕು. ಜಮೀನುಗಳ ಒಡೆತನ ಪಡೆದು, ವಿದ್ಯಾರ್ಥಿಗಳ ಸಹಾಯದ ಮೂಲಕ ಅಥವಾ ಕೂಲಿ ಕೃಷಿ ಕಾರ್ಮಿಕರ ಮೂಲಕ ಸಾಗುವಳಿಯಲ್ಲಿ ತೊಡಗಿರುವ ವಸತಿ ನಿಲಯಗಳಂಥ ಸಂಸ್ಥೆಗಳೂ ಇವೆ. ಸ್ವಂತ ಸಾಗುವಳಿಯ ವ್ಯಾಖ್ಯೆ ಕೇವಲ ವ್ಯಕ್ತಿಗಳು ಅಥವಾ ಕುಟುಂಬಗಳಿಗೆ ಮಾತ್ರ ಅನ್ವಯವಾಗುವುದಿಲ್ಲ. ಈ ಸಂಸ್ಥೆಗಳಿಗೂ ಕೂಡ ಅನ್ವಯವಾಗುತ್ತದೆ. ಸದನದಲ್ಲಿ ಮಂಡಿಸಿರುವ ತಿದ್ದುಪಡಿಯ ಉದ್ದೇಶ ಕುರಿತಂತೆ ಬಹಳ ವಿಷಯಗಳನ್ನು ಹೇಳಲಾಗಿದೆ. ಇದೆಲ್ಲಾ ವಿವರಣೆಗಳು ಅಷ್ಟೇ ----- ಸಂಬಂಧಪಟ್ಟಂತೆ ವಿವರಣೆಯನ್ನು ನೀಡಲಾಗಿದ್ದು -

**ಅಪರಾಹ್ನ 3-00**

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:-** ಸಭಾಧ್ಯಕ್ಷರೆ, ಮಾನ್ಯ ಸದಸ್ಯರು ಚರ್ಚೆಗೆ ಉತ್ತರ ನೀಡುತ್ತಿದ್ದಾರೆ. ಶ್ರೀ ಎಂ.ಸಿ ನರಸಿಂಹನ್‌ರವರು ಎತ್ತಿದ ಅಂಶದ ಮೇಲೆ ಅವರು ಮಾತನಾಡುತ್ತಿಲ್ಲ. ಸದನದ ಘನತೆಯನ್ನು ಪಾಲಿಸುವಂತೆ ಸಭಾಧ್ಯಕ್ಷರು ಅವರಿಗೆ ಹೇಳಬೇಕು.

**ಶ್ರೀ ಕಡಿದಾಳ್ ಮಂಜಪ್ಪ:-** ಈ ಸಂಘಗಳಿಗೆ ಅಥವಾ ನಿಕಾಯಗಳಿಗೆ ನಿಷೇಧವಿರದಿದ್ದಲ್ಲಿ, ಸ್ವಂತ ಸಾಗುವಳಿಯಲ್ಲಿ ಏನಿರಬೇಕೆಂಬುದು ನಿರ್ಧರಿಸಬೇಕಾದ ವಿಷಯ. ಕುಟುಂಬಗಳಿಗೆ ಸಂಬಂಧಿಸಿದಂತೆ ಕೂಲಿ ಕಾರ್ಮಿಕರು, ಸ್ವಂತ ಶ್ರಮ ಅಥವಾ ಮೇಲ್ವಿಚಾರಣೆ "ಮುಖಾಂತರ" ಎಂದು ಹೇಳಿದ್ದೇವೆ. ಆದರೆ ಈ ಸಂಸ್ಥೆಗಳ ಸಂದರ್ಭದಲ್ಲಿ ಯಾರು ಮೇಲ್ವಿಚಾರಣೆ ಮಾಡಬೇಕು. ಒಂದು ವೇಳೆ ಹೋಟೆಲ್ ಜಮೀನುಗಳನ್ನು ಹೊಂದಿದ್ದು ಸ್ವಂತ ಸಾಗುವಳಿ ಮಾಡುತ್ತಿರುವ ಸಂದರ್ಭದಲ್ಲಿ ಅದನ್ನು ಯಾರು ಮಾಡಬೇಕು? ಸಹಕಾರ ಸಂಘಗಳು ಸ್ವಂತ ಸಾಗುವಳಿಯಲ್ಲಿ ತೊಡಗಿದ್ದರೆ, ಅದರ ವ್ಯವಸ್ಥಾಪಕರು ಅಥವಾ ಯಾರೇ ನೌಕರರು ಮೇಲ್ವಿಚಾರಣೆ ನಡೆಸಬೇಕು; ಸಂಘದ ಯಾರೇ ನೌಕರರು ಮತ್ತು ಕಂಪನಿಯ ಸಂದರ್ಭದಲ್ಲಿ ಯಾರು ಸಾಗುವಳಿ ಮಾಡಬೇಕು. ಕೆಲವು ಕಂಪನಿಗಳು ಕಾಫಿ ಎಸ್ಟೇಟುಗಳನ್ನು ಹೊಂದಿವೆ. ಧಾರ್ಮಿಕ ಸಂಸ್ಥೆಗಳನ್ನು ತೆಗೆದುಕೊಳ್ಳಿ. ಈ ವಿವರಣೆ ಅವಶ್ಯಕವಿತ್ತೆಂದು ಕಾನೂನು ಇಲಾಖೆ ನನಗೆ ಸಲಹೆ ಮಾಡಿದೆ. ಯಾವುದೇ ಹೊಸದನ್ನು ಸೇರಿಸುತ್ತಿಲ್ಲ. ಇದು ಕೇವಲ ವಿವರಣೆ ಮಾತ್ರ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:-** ಕ್ರಿಯಾಲೋಪದ ಬಗ್ಗೆ ಏನಾಯಿತು?

**ಮಾನ್ಯ ಸಭಾಧ್ಯಕ್ಷರು:-** ಕ್ರಿಯಾಲೋಪವಾಗಿಲ್ಲ.

ಸದನ ಈ ಮುಕ್ತಾಯವಾಗಿ ಮತ್ತು ಅರ್ಧಗಂಟೆಯ ನಂತರ ಪುನಃ ಸೇರುತ್ತದೆ.

*ಈ ಸದನವು ಮೂರು ಗಂಟೆ ಐದು ನಿಮಿಷಗಳವರೆಗೆ ವಿರಾಮಕ್ಕಾಗಿ ಮುಂದೂಡಲಾಯಿತು ಮತ್ತು ಸದನವು ಮರುಗಂಟೆ ಮೂವತ್ತೈದು ನಿಮಿಷಕ್ಕೆ ಪುನಃ ಸೇರಿತು.*

**(ಮಾನ್ಯ ಸಭಾಧ್ಯಕ್ಷರವರ ಅಧ್ಯಕ್ಷತೆಯಲ್ಲಿ)**

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:–** ಸ್ವಾಮಿ ನಾನಿನ್ನು ಹೆಚ್ಚಾಗಿ ಮಾತನಾಡುವುದಕ್ಕೆ ಇಷ್ಟಪಡುವುದಿಲ್ಲ. ಇನ್ನು ಒಂದೇ ನಿಮಿಷದಲ್ಲಿ ಮುಗಿಸಿ ಬಿಡುತ್ತೇನೆ. ದೇವರ ಹೆಸರಿನಲಿ, ಸೃಷ್ಟಿಕರ್ತನ ಹೆಸರಿನಲ್ಲಿ ಹೀಗೆ ಇನ್ನೂ ಯಾವ ಯಾವುದೋ ಹೆಸರಿನಲ್ಲಿ ಈ ಭೂ ಸುಧಾರಣೆಯನ್ನು ಜಾರಿಗೆ ತರಬೇಕೆಂದು ಮನಸ್ಸಿನಲ್ಲಿ ಏನೇನೋ ವಿಚಾರಗಳನ್ನಿಟ್ಟುಕೊಂಡು ಶ್ರೀ ಮಾನ್ಯ ಮಂಜಪ್ಪನವರು ಈಗ ಇಂಥ ಒಂದು ತಿದ್ದುಪಡಿಯನ್ನು ತಂದಿರುವುದು ಖಂಡಿತ ಸರಿಯಾದುದಲ್ಲ. ಅವರಿಗೆ ಯಾವ ಲೀಗಲ್ ಎಕ್ಸ್‌ಪರ್ಟ್‌ಗಳೂ ಈ ವಿಚಾರಗಳನ್ನೆಲ್ಲಾ ಅವರ ತಲೆಗೆ ಹಾಕಿದರೋ ಅವುಗಳನ್ನೆಲ್ಲ ಒತ್ತಟ್ಟಿಗಿಟ್ಟು ಇಲ್ಲವೇ ಅವುಗಳನ್ನೆಲ್ಲಾ ತಳ್ಳಿಹಾಕಿ ಈಗ ಅವರು ತಂದಿರುವ ತಿದ್ದುಪಡಿಯನ್ನು ಅವರು ದಯವಿಟ್ಟು ವಾಪಸ್ಸು ತೆಗೆದುಕೊಳ್ಳಬೇಕೆಂದು ಅವರನ್ನು ಕೇಳಿಕೊಂಡು ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಬಿ. ಶ್ಯಾಮಸುಂದರ್:–** ಸಭಾಧ್ಯಕ್ಷರೇ, ಆಡಳಿತ ಪಕ್ಷವು, ಮೂಲತಃ ಏನು ಮಾಡಬೇಕೆಂದಿತ್ತೋ ಅದನ್ನು ಮಾಡಬಾರದೆಂಬುದನ್ನು ಈ ತಿದ್ದುಪಡಿಗೆ ತಿದ್ದುಪಡಿ ಅಥವಾ ವಿವರಣೆಯನ್ನು ತೋರಿಸುತ್ತದೆ. ಕಾನೂನು ಇಲಾಖೆಯು ಏನನ್ನಾದರೂ ಹೇಳಬಹುದು. ಆದರೆ, ಒಂದಂತೂ ನಿಜ. ತಾವೇ ಪ್ರಜಾಪ್ರಭುತ್ವವಾದಿಗಳೆಂದು ಹೇಳಿಕೊಳ್ಳುತ್ತಾರೆ ಈ ಜನರು ಆದರೆ ಈ ತಿದ್ದುಪಡಿ ಪ್ರಜಾಪ್ರಭುತ್ವದ ಮೂಲ ಉದ್ದೇಶಕ್ಕೆ ಸಂವಿಧಾನದಲ್ಲಿ ನಮಗಾಗಿ ಅನೇಕ ಹಕ್ಕುಗಳನ್ನು ನಿಯಮಿಸಿಕೊಂಡಿದ್ದೇವೆ. ಅಂಥ ಒಂದು ಹಕ್ಕು ಸಮಾನತೆಯ ಹಕ್ಕು. ಈ ತಿದ್ದುಪಡಿಯು ಸಮಾನತೆಯ ಇಡೀ ಆದರ್ಶವನ್ನು ಅನೂರ್ಜಿತಗೊಳಿಸುತ್ತದೆ. ನಾವು ಈಗಾಗಲೆ "ವ್ಯಕ್ತಿ" ಮತ್ತು "ಸ್ವಂತ" ಎಂಬ ಪದಗಳನ್ನು ಅರ್ಥೈಸಿದ್ದೇವೆ. ನೀವು ಈಗ ಯಾವುದೇ ವಿವರಣೆಯನ್ನು ಸೇರಿಸಲು ಸಾಧ್ಯವಿಲ್ಲ. ಹಾಗೇನಾದರೆ ಅದು ಆ ವ್ಯಾಖ್ಯೆಯನ್ನು ಬದಲಾಯಿಸುತ್ತದೆ. ಉದಾಹರಣೆಗೆ "ಮಹಿಳೆ" ಎಂಬ ಪದವನ್ನೇ ತೆಗೆದುಕೊಳ್ಳಿ, ಈ ಪದವನ್ನು ಪರಿಭಾಷಿಸಿದ ನಂತರ, ಮಹಿಳೆ ಎಂದರೆ ಬಾಲಕರು, ಬಾಲಕಿಯರು ಮತ್ತು ಪುರುಷರೆಂದು ನೀವು ವಿವರಣೆ ಸೇರಿಸಲು ಸಾಧ್ಯವಿಲ್ಲ. ಪರಿಭಾಷಿಣೆ ವಿವರಣೆಯನ್ನು ಸೇರಿಸಬೇಕಾದಲ್ಲಿ ಮಾರ್ಗದರ್ಶನ ತತ್ವಗಳು ಇರತಕ್ಕದ್ದು. ಈ ವಿಧಾನ ಮಂಡಲದಲ್ಲಿ ಯಾವುದೇ ಪರಿಭಾಷೆಗೆ ಯಾವುದೇ ವಿವರಣೆಯನ್ನು ನೀಡಲು ನೀವು ಹಕ್ಕುಳ್ಳವರೆಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಆದರೆ ಅದಕ್ಕೆ ಪರಿಮಿತಿ ಇದೆ. ನೀವು ಈಗಾಗಲೆ "ಸ್ವಂತ ಸಾಗುವಳಿ ಮಾಡುವುದು" ಮತ್ತು "ವ್ಯಕ್ತಿ" ಎಂಬ ಪದಗಳನ್ನು ಅರ್ಥೈಸಿದ್ದೀರಿ. "ವ್ಯಕ್ತಿ" ಎಂಬ ಪರಭಾರಿ ಯಾವ ಹಂತವನ್ನು ಮುಟ್ಟುತ್ತದೆ ಅಂದರೆ ಅವರ ಇಚ್ಛೆಯ ವಿರುದ್ಧವಾಗಿ ಕೆಲಸ ಮಾಡಲು ಯಾರೊಬ್ಬರನ್ನು ಒತ್ತಾಯ ಮಾಡತಕ್ಕದ್ದಲ್ಲ. "ಸ್ವಂತ ಸಾಗುವಳಿ ಮಾಡು" ಎಂಬ ಪರಿಭಾಷೆಯ ಅಡಿಯಲ್ಲಿ ಪರವಾಗಿ ಕೆಲಸ ಮಾಡಲು ಅವನು ಯಾರನ್ನಾದರೂ ಕೂಲಿ ಆಧಾರದ ಮೇಲೆ ನೇಮಕ ಮಾಡಿಕೊಳ್ಳಬಹುದು ಅಥವಾ ಕೃಷಿ ಕಾರ್ಮಿಕರನ್ನು ತೊಡಗಿಸಿಕೊಳ್ಳಬಹುದು ಎಂಬ ವಿವರಣೆಯನ್ನು ತಾವು ಹೇಗೆ ಸೇರಿಸುತ್ತೀರಿ ಎನ್ನುವುದು ನನಗೆ ತಿಳಿಯುತ್ತಿಲ್ಲ.

ಇದು ನಿಮ್ಮ ಸಂವಿಧಾನದ ಆಶಯಕ್ಕೆ ವಿರುದ್ಧವಾಗಿರುವುದು. ಜೀತ ಪದ್ಧತಿ ಅಥವಾ ಬಲವಂತ ದುಡಿಮೆ ಪದ್ಧತಿನ್ನು ನೀವು ನಿರ್ಮೂಲನೆ ಮಾಡಬಯಸಿದ್ದೀರಿ. ಈ ದೇಶವು ಹಲವಾರು ಅಸಮರ್ಥತೆಗಳಿಂದ ಬಳಲುತ್ತಿರುವಾಗ, ದೇಶಾದ್ಯಂತ ಜೀತಪದ್ಧತಿ ಅಥವಾ ಬಲವಂತ ದುಡಿಮೆ

ಪದ್ಧತಿಯನ್ನು ನೀವು ಪ್ರಾರಂಭಿಸುತ್ತಿದ್ದೀರಿ. ದೇಶದಲ್ಲಿನ ಈ ಪದ್ಧತಿಯನ್ನು ಹೆಚ್ಚಿಸಲು ಅಥವಾ ಒತ್ತಾಯಿಸಲು ಈ ಕ್ರಮ ಸಹಾಯಮಾಡುತ್ತದೆ. ಸಚಿವಸಂಪುಟದ ಒಬ್ಬ ಸಚಿವರು ಸಂತೋಷದಿಂದ ಅಥವಾ ದಯೆತೋರಿ ಅಥವಾ ಬುದ್ಧಿವಂತಿಕೆಯಿಂದ ಅವರ ಸ್ವಂತ ಪಕ್ಷದ ವಿರುದ್ಧ ಕೋಪಗೊಂಡು, ಸರ್ಕಾರದ ಪರವಾಗಿ ಸರ್ಕಾರಿ ಮುದ್ರಣಾಲಯದ ಮೂಲಕ ಸರ್ಕಾರದಿಂದಲೇ ಒಂದು ಪುಸ್ತಕವನ್ನು ಪ್ರಕಟಿಸಿದರು. ಅವರು ಬೇರೆ ಯಾರೂ ಅಲ್ಲ. ಸಮಾಜ ಕಲ್ಯಾಣ ಸಚಿವರಾದ ಶ್ರೀ ಎನ್. ರಾಚಯ್ಯರವರು. ಈ ರಾಷ್ಟ್ರದಲ್ಲಿ ಜೀತಪದ್ಧತಿ ಇನ್ನೂ ಜಾರಿಯಲ್ಲಿರುವುದನ್ನು ಆ ಮಹನೀಯರು ತಿಳಿಸುತ್ತಾರೆ. ಈ ಬಗ್ಗೆ ಹಲವಾರು ಪ್ರಕರಣಗಳನ್ನು ಅವರು ಉಲ್ಲೇಖಿಸುತ್ತಾರೆ. ಅವರು ಈ ವಿಷಯವನ್ನು ಸಚಿವಸಂಪುಟದ ಗಮನಕ್ಕೆ ತಂದಿದ್ದಾರೆಯೇ ಎನ್ನುವುದು ನನಗೆ ಗೊತ್ತಿಲ್ಲ ಮತ್ತು ಹಾಗಾದಲ್ಲಿ ಯಾವ ಕ್ರಮವನ್ನು ಕೈಗೊಳ್ಳಲಾಗಿದೆ. ಜಾರಿಗೊಳಿಸ ಬೇಕೆಂದಿರುವ ವಿವರಣೆಗಳಲ್ಲಿ ಯಾವುದೇ ಸಂದರ್ಭದಲ್ಲಿ ಪರಿಭಾಷೆಗಳು, ಈ ದೇಶದ ಜನರನ್ನು ತಪ್ಪುದಾರಿಗೆ ಎಳೆಯುತ್ತವೆ. ಈ ಎರಡು ಖಂಡಗಳೇ ಇಡೀ ವಿಧೇಯಕದ ತಿರುಳು. ಒಂದು ಪಾತ್ರೆಯ ಹಾಲಿಗೆ ಒಂದು ಹನಿ ವಿಷವನ್ನು ಬೆರೆಸಿದರೆ, ಹಾಲು ಸುರಕ್ಷಿವಾಗಿರುತ್ತದೆಯೇ? ಅದೇರೀತಿ, ಈ ಎರಡೂ ಖಂಡಗಳಿಂದಾಗಿ ಇಡೀ ವಿಧೇಯಕವೇ ಕೆಲಸಕ್ಕೆ ಬಾರದಂತಾಗಿದೆ.

ಉಳುವವನನ್ನೇ ಭೂ ಒಡೆಯನನ್ನಾಗಿ ಮಾಡುವುದಾಗಿ ಇಡೀ ವಿಶ್ವಕ್ಕೆ ಮತ್ತು ರಾಷ್ಟ್ರಗಳ ಘೋಷಣೆ ಮಾಡಿ ಎ.ಐ.ಸಿ.ಸಿ. ಮೂಲಕ ಅಂಗೀಕರಿಸಿದ ಅನೇಕ ನಿರ್ಣಯಗಳು ಮತ್ತು ಅವಧಿ ಸಮ್ಮೇಳನದಲ್ಲಿ ಪಾಸು ಮಾಡಿದ ಪವಿತ್ರ ನಿರ್ಣಯಗಳ ಕಡೆಗೆ ಮಾನ್ಯ ಸಚಿವರ ಗಮನವನ್ನು ಸೆಳೆಯಬಯಸುತ್ತೇನೆ. ಪಂಡಿತ್ ಜವಹರಲಾಲ್ ನೆಹರು (ಯುಎಸ್‌ಐ)ಗೆ ಭೇಟಿ ನೀಡಿದ್ದಾಗ, ಇಂಥ ಹೇಳಿಕೆ ನೀಡಲು ಅವಕಾಶವನ್ನು ಉಪಯೋಗಿಸಿಕೊಂಡಿದ್ದರು. ಆದರೆ ಈ ದೇಶದ ಒಳಗೆ ಏನು ನಡೆಯುತ್ತಿದೆ? ನಂಬಿಸುವಂಥ ಪ್ರಯತ್ನ ಸಫಲವಾಯಿತೆ? ಉಳುವವರು ತಮ್ಮ ಜಮೀನುಗಳಿಗೆ ಮಾಲೀಕರಾಗುವ ಯಾವುದೇ ಭರವಸೆಯನ್ನು ಹೊಂದಿದ್ದಾರಾ? ಇಲ್ಲ. ಜೀತಪದ್ಧತಿಯನ್ನು ಮುಂದುವರಿಸಲು ಹಾಗೂ ಶಾಶ್ವತಗೊಳಿಸಲು ನೀವು ಪ್ರಯತ್ನಿಸುತ್ತಿದ್ದೀರಿ. ನಿಮ್ಮದು ಪ್ರಜಾಪ್ರಭುತ್ವ ಸರ್ಕಾರವಲ್ಲ, ಆದರೆ ಪಕ್ಷದ ಸರ್ಕಾರ. ನೀವು ಈ ದೇಶವನ್ನು ಪ್ರಜಾಪ್ರಭುತ್ವದ ಕಡೆ ಕೊಂಡೊಯ್ಯುತ್ತಿಲ್ಲ. ಆದರೆ ನಿಸ್ಸಂದೇಹವಾಗಿ ನಿರಂಕುಶಾಧಿತ್ವದ ಕಡೆ ಕೊಂಡೊಯ್ಯುತ್ತಿದ್ದೀರಿ. ವಿಧೇಯಕವು ಗತಕಾಲದ ವಿಧೇಯಕವಾಗಿದ್ದ ಇದರ ಪರಿಣಾಮಗಳನ್ನು ಹಾಳುಮಾಡಲಾಗಿದೆ. ಇದನ್ನು ನಿಷ್ಕ್ರಿಯಗೊಳಿಸಲಾಗಿದೆ.

ಜಾತ್ಯಾತೀತಕ್ಕೆ ಬದ್ಧವಾದ ರಾಜ್ಯದಲ್ಲಿ, ಧಾರ್ಮಿಕ ಮತ್ತು ಧರ್ಮಾರ್ಥ ಸಂಸ್ಥೆಗಳನ್ನು ಉಲ್ಲೇಖಿಸಿ ಅವುಗಳಿಗೆ ರಕ್ಷಣೆ ನೀಡುವ ಪ್ರಸ್ತಾವವನ್ನು ಏಕೆ ಮಾಡಲಾಗಿದೆ ಎನ್ನುವುದನ್ನು ನಾನು ಕೇಳಬಹುದೇ? ಇತರರ ಹಿತಾಸಕ್ತಿಗಳ ವಿರುದ್ಧವಾಗಿ ನಿರ್ದಿಷ್ಟವಾದ ಒಂದು ಧಾರ್ಮಿಕ ವರ್ಗದ ಹಿತಾಸಕ್ತಿಗಳನ್ನು ಸರ್ಕಾರ ಹೇಗೆ ಕಾಪಾಡುತ್ತದೆ. ಸರ್ಕಾರದ ಯಾವುದೇ ಮುಖ್ಯ ಹೇಳಿಕೆಗಳಲ್ಲಿ ಅಥವಾ ದಾಖಲೆಗಳಲ್ಲಿ ಧರ್ಮವನ್ನು ಕುರಿತಾದ ಉಲ್ಲೇಖವಿರಬಾರದು. ಯಾವ ಧರ್ಮ ನಮ್ಮನ್ನು ನೂರಾರು ವರ್ಷಗಳ ಕಾಲ ಗುಲಾಮಗಿರಿ ಸ್ಥಿತಿಯಲ್ಲಿಟ್ಟಿತ್ತು. ಯಾವ ಧರ್ಮ ಅಸ್ಪೃಶ್ಯತೆಯೆಂಬ ಹೀನಾಯ ಪದ್ಧತಿಯನ್ನು ಬೋಧಿಸಿ ಆಚರಣೆಗೊಳ ಪಡಿಸಿತ್ತೋ ಅಂಥ ಧರ್ಮವನ್ನು ನಾನು ಉಗ್ರವಾಗಿ ಖಂಡಿಸುತ್ತೇನೆ.

ಧಾರ್ಮಿಕ ಹೆಸರಿನಲ್ಲಿ ಅಥವಾ ಅಧಿಕಾರದಲ್ಲಿರುವ ಪಕ್ಷಕ್ಕೆ ಬೆಂಬಲ ನೀಡುವ ಕೆಲವೇ ಕೆಲವು ವ್ಯಕ್ತಿಗಳ ಹಿತಾಸಕ್ತಿಯನ್ನು ಕಾಪಾಡುವ ನಿಟ್ಟಿನಲ್ಲಿ ಸರ್ಕಾರ ಕಾರ್ಯನಿರ್ವಹಿಸಿದ್ದಾದರೆ ಅದು ಸಂವಿಧಾನಕ್ಕೆ ಬಗೆದ ಅಪಚಾರವಾಗುತ್ತದೆ. ಇತ್ತೀಚೆಗೆ, ಸಂಸತ್ತು ಎಲ್ಲಾ ಧಾರ್ಮಿಕ ವಿಷಯಗಳಿಗೆ ಸಂಬಂಧಪಟ್ಟ ಉಲ್ಲೇಖಗಳನ್ನು ತೊಡೆದುಹಾಕಲು ಒಂದು ತಿದ್ದುಪಡಿಯನ್ನು ಇತ್ತೀಚೆಗೆ ಸಂಸತ್ತಿನಲ್ಲಿ ಮಂಡಿಸಲಾಗಿದೆ. ನಾವು ಕೇವಲ ತಿದ್ದುಪಡಿಯನ್ನು ಮಾತ್ರವಲ್ಲದೆ ಮನರ್‌ವ್ಯಾಖ್ಯಾನಿಸಬೇಕಾಗಿರುವ ಆ ಎರಡು ಖಂಡಗಳನ್ನೂ ವಿರೋಧಿಸುತ್ತಿದ್ದೇವೆ. ಇಲ್ಲದಿದ್ದಲ್ಲಿ ಅವುಗಳು ಯಾವುದೇ ರೀತಿಯಲ್ಲಿ ಸುಧಾರಣೆಗಳಾಗುವುದಿಲ್ಲ. ಆದರೆ, ಸಂಖ್ಯೆಯಲ್ಲಿ ಅದೆಷ್ಟೇ ದೊಡ್ಡ ಪ್ರಮಾಣದಲ್ಲಿರಲಿ, ಆ ಜನತೆಯ ಕೆಲವು ವರ್ಗಗಳನ್ನು ತುಳಿಯಲು ಅಧಿಕಾರಯುತ ಸಾಧನಗಳಾಗುತ್ತವೆ.

**ಶ್ರೀ ಕಡಿದಾಳ್ ಮಂಜಪ್ಪ:**– ಸಭಾಧ್ಯಕ್ಷರೇ ಶ್ರೀ ಎಂ.ಸಿ. ನರಸಿಂಹನ್‌ರವರು ಮುಂದಿಟ್ಟ ಕ್ರಿಯಾಲೋಕಕ್ಕೆ ಸಂಬಂಧಿಸಿದಂತೆ ಚರ್ಚಿಸುವಾಗ, ಈ ತಿದ್ದುಪಡಿಯ ಅವಶ್ಯಕತೆ ಬಗ್ಗೆ ಕೆಲವು ಗಮನಾರ್ಹ ಅಂಶಗಳನ್ನು ನಾನು ಈಗಾಗಲೇ ನೀಡಿದ್ದೇನೆ. ಈ ರಾಜ್ಯದಲ್ಲಿ ಸ್ವತ್ತುಗಳನ್ನು ಹೊಂದಿರುವಂಥ ಮತ್ತು ಸ್ವಂತ ಸಾಗುವಳಿಯಲ್ಲಿ ತೊಡಗಿರುವಂಥ ಕೆಲವು ಸಂಸ್ಥೆಗಳು ಇವೆ ಎಂಬುದು ಚೆನ್ನಾಗಿ ಗೊತ್ತಿರುವಂಥ ವಿಷಯ. ಸನ್ಮಾನ್ಯ ಸದಸ್ಯರು ಈ ಉಪಬಂಧಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದ್ದಲ್ಲಿ ಯಾವುದೇ ಪ್ರಚೋದನೆಗೆ ಅವಕಾಶವಿರುತ್ತಿರಲಿಲ್ಲ.

**ಶ್ರೀ ವಿ.ಎಸ್. ಪಾಟೀಲ್:**– ವಿವರಣೆ ಅಂಶಕ್ಕೆ ಸಂಬಂಧಪಟ್ಟಂತೆ, ಎಂದರೆ ಸ್ವತ್ತುಗಳು ಹೊಂದಿರುವುದಕ್ಕೆ ಸಂಬಂಧಪಟ್ಟಂತೆ, ಈ ಅಧಿನಿಯಮದ ಮೇರೆಗೆ ಅಥವಾ ಯಾವುದೇ ಇತರ ಅಧಿನಿಯಮಿತಿ ಅಥವಾ ಸಂಪ್ರದಾಯದ ಅಡಿಯಲ್ಲಿ ಹೊಂದಿರುವ ಸ್ವತ್ತುಗಳು ಎಂದು ಈ ಪದಗಳ ಅರ್ಥವೇ?

**ಶ್ರೀ ಕಡಿದಾಳ್ ಮಂಜಪ್ಪ:**– ಆ ಅಂಶದ ಬಗ್ಗೆಯೂ ನಾನು ಪ್ರಸ್ತಾವಿಸುತ್ತೇನೆ. 29ನೇ ಬಾಬುವಿನಲ್ಲಿ ಪುನಃ ಸ್ವಾಧೀನ ಜಮೀನನ್ನು ಅರ್ಥೈಸಲಾಗಿದೆ. ಈ ಸಂಸ್ಥೆಗಳು ಮತ್ತು ನಿಕಾಯಗಳು, ಅವು ಧಾರ್ಮಿಕ ಅಥವಾ ಧರ್ಮಾರ್ಥ ಅಥವಾ ಬೇರೆಯಾಗಿರಲಿ ಗೇಣಿದಾರರಿಂದ ಭೂಮಿಯನ್ನು ಪುನಃ ಸ್ವಾಧೀನಪಡಿಸಿಕೊಳ್ಳಲು ಸಾಧ್ಯವಿಲ್ಲವೆಂದು ಸ್ಪಷ್ಟವಾಗಿ ಹೇಳಲಾಗಿದೆ. ಜಮೀನುಗಳನ್ನು ಸಾಗುವಳಿ ಮಾಡಲು ಅವು ಸಮರ್ಥವಾಗಿವೆ. ಸ್ವಂತ ಜಮೀನುಗಳನ್ನು ಹೊಂದಿರುವ ಮತ್ತು ಗೇಣಿದಾರರು ಇಲ್ಲದೆಯೇ ಕೂಲಿ ಕಾರ್ಮಿಕರ ಸಹಾಯದೊಂದಿಗೆ ಅಥವಾ ವಿದ್ಯಾರ್ಥಿ ನಿಲಯದ ನಿವಾಸಿಗಳ ಸಹಕಾರದೊಂದಿಗೆ ಪ್ರಸಕ್ತ ಸಾಗುವಳಿ ಮಾಡುತ್ತಿರುವ ಅನೇಕ ವಸತಿ ನಿಲಯಗಳು ರಾಜ್ಯದಲ್ಲಿವೆ. ಸ್ವಂತ ಜಮೀನುಗಳನ್ನು ಹೊಂದಿ ಸ್ವತಃ ಸಾಗುವಳಿ ಮಾಡುತ್ತಿರುವ ಅನೇಕ ಕೃಷಿ ಫಾರಂಗಳು ಇದೆ. ಅದೇ ರೀತಿಯಲ್ಲಿ, ಜಮೀನುಗಳನ್ನು ಹೊಂದಿ ಸಾಗುವಳಿ ಮಾಡುತ್ತಿರುವ ಅನೇಕ ಕಂಪನಿಗಳೂ ಇವೆ. ಅಂಥವರ ಪ್ರಕರಣದಲ್ಲಿ ಸ್ವಂತ ಸಾಗುವಳಿ ಅಂದರೇನು ಎನ್ನುವುದರ ಬಗ್ಗೆ ಈ ವಿಧೇಯಕ ಸ್ಪಷ್ಟತೆಯನ್ನು ನೀಡಬಯಸುತ್ತದೆ.

**ಶ್ರೀ ಬಿ. ಶ್ಯಾಮಸುಂದರ್**:– ಧಾರ್ಮಿಕ ಸಂಸ್ಥೆಗಳು ಸ್ವಂತವಾಗಿ ಸಾಗುವಳಿ ಮಾಡಲು ಸಾಧ್ಯವಿಲ್ಲ. ಅವುಗಳ ಸ್ವತ್ತುಗಳು ಒಂದು ನಿರ್ದಿಷ್ಟ ಧಾರ್ಮದ ಪರವಾಗಿದ್ದು ಅವರಿಗೆ ಸ್ವಂತ ಸಾಗುವಳಿ ಮಾಡಲು ಸಾಧ್ಯವಾಗುವುದಿಲ್ಲ. ಧಾರ್ಮಿಕ ಮುಖಂಡರು ಇತರರನ್ನು ಶೋಷಿಸಿ ಅವರ ಸ್ವತ್ತುಗಳನ್ನು ದೋಚುವರು.

**ಶ್ರೀ ಕಡಿದಾಳ್ ಮಂಜಪ್ಪ**:– ಸನ್ಮಾನ್ಯ ಸದಸ್ಯರು ಹೊಂದಿರುವ ಅಭಿಪ್ರಾಯಗಳು ಎಷ್ಟೇ ಸಮರ್ಥವಾಗಿದ್ದರೂ, ವಾಸ್ತವ ಸಂಗತಿಗಳು ಅಲ್ಲಿವೆ. ಪ್ರಸ್ತುತ ಕೆಲವು ಸಂಸ್ಥೆಗಳು ಸ್ವಂತ ಸ್ವತ್ತುಗಳನ್ನು ಹೊಂದಿದ್ದು ಸ್ವಂತ ಸಾಗುವಳಿ ಮಾಡುತ್ತಿವೆ. ಕೃಷಿಯೋಗ್ಯ ಭೂಮಿಯನ್ನಾಗಿ ಮಾಡುತ್ತಿರುವವು.

ವ್ಯಕ್ತಿಗಳಿಗೆ ಸಂಬಂಧಿಸಿದಂತೆ, "ಸ್ವಂತ ಸಾಗುವಳಿ ಮಾಡುವುದು" ಎಂದರೆ ಒಬ್ಬರು – (i) ತಮ್ಮ ಸ್ವಂತ ಪರಿಶ್ರಮದಿಂದ; ಅಥವಾ (ii) ಒಂದು ಕುಟುಂಬದ ಯಾರೇ ಸದಸ್ಯರ ಪರಿಶ್ರಮದಿಂದ; ಅಥವಾ (iii) ಸ್ವತಃ ಅಥವಾ ಒಂದು ಕುಟುಂಬದ ಯಾರೇ ಸದಸ್ಯರ ಸ್ವಂತ ಮೇಲ್ವಿಚಾರಣೆ ಅಡಿಯಲ್ಲಿ ಕೂಲಿ ಕಾರ್ಮಿಕರ ಮೂಲಕ ಅಥವಾ ಬೆಳೆಯ ಭಾಗವನ್ನು ನೀಡದೇ ನಗದು ಅಥವಾ ವಸ್ತುಗಳ ರೂಪದಲ್ಲಿ ಮಜೂರಿಯನ್ನು ಸಂದಾಯ ಮಾಡುವುದರ ಮೇರೆಗೆ ಕೆಲಸಗಾರರ ಮೂಲಕ ಅಥವಾ ಆದರೆ, ಕೆಲವು ಸಂಘಗಳಿಗೆ ಸಂಬಂಧಿಸಿದಂತೆ, ಅವು ಸ್ವಂತ ಅಥವಾ ಕುಟುಂಬದ ಸದಸ್ಯರ ಮೂಲಕ ಸಾಗುವಳಿ ಮಾಡುತ್ತವೆ ಎಂದು ಹೇಳಲು ಬರುವುದಿಲ್ಲ. ಆದ್ದರಿಂದ, ಈ ಸಂಸ್ಥೆಗಳು, ಅವರ ಏಜೆಂಟರು ಮತ್ತು ನೌಕರರ ಮೇಲ್ವಿಚಾರಣೆ ಮುಕಾಂತರ ಸಾಗುವಳಿ ನಡೆಸಬಹುದೆಂದು ಸ್ಪಷ್ಟಪಡಿಸುವುದಕ್ಕಾಗಿ ಈ ತಿದ್ದುಪಡಿಯನ್ನು ಪ್ರಸ್ತಾವಿಸಲಾಗಿದೆ. ನನ್ನ ಮೇಲೆ ಮತ್ತು ಆಡಳಿತ ಪಕ್ಷದ ಮೇಲೆ ಅನೇಕ ಕಾರಣಗಳನ್ನು ಆರೋಪಿಸಲಾಗಿದೆ. ಅತ್ತಕಡೆಯ ಕೆಲವು ಗೌರವಾನ್ವಿತ ಸದಸ್ಯರು ಉಪಯೋಗಿಸಿದಂಥ ಕಠಿಣ ಭಾಷೆಯನ್ನು ಉಪಯೋಗಿಸಲು ನಾನು ಬಯಸುವುದಿಲ್ಲ. ಕಪಟ, ಮೋಸ ಮುಂತಾದ ಪದಗಳನ್ನು ಉಪಯೋಗಿಸಲಾಯಿತು. ಚುನಾವಣೆಗಳು ಸಮೀಪಿಸುತ್ತಿವೆ ಎಂದು ಅವರಿಗೆ ಗೊತ್ತು. ಇಂಥ ನುಡಿಗಟ್ಟುಗಳಿಂದ ಅಥವಾ ಅಭಿಪ್ರಾಯಗಳಿಂದ ಹಿತವಾಗುತ್ತಿದ್ದರೆ ಅವುಗಳನ್ನು ಉಪಯೋಗಿಸಲಿ. ನಾನು ತಪ್ಪು ತಿಳಿದುಕೊಳ್ಳುವುದಿಲ್ಲ.

ವಿವಿಧ ಕ್ಷೇತ್ರಗಳಲ್ಲಿ ಇಂಥ ಶಾಸನ ಕಾನೂನು ಪುಸ್ತಕಗಳಲ್ಲಿ ಕಾಣಿಸಿಕೊಳ್ಳುವ ವಾಸನೆ ಅವರಿಗೆ ತಗುಲಿದೆ. (2)ನೇ ಉಪಖಂಡದಲ್ಲಿ ಗೊತ್ತುಪಡಿಸಿದ ದಿನಾಂಕಗಳು, ನಿರ್ದಿಷ್ಟ ದಿನಾಂಕಗಳ ಮುಂಚೆ ಕಾನೂನುಬಾಹಿರವಾಗಿ ಹೊರಹಾಕಲ್ಪಟ್ಟಂಥ ವ್ಯಕ್ತಿಗಳಿಗೆ ಪರಿಹಾರ ನೀಡಲು ಉದ್ದೇಶಿಸಿವೆ. ಈ ಶಾಸನದ ವಾಸನೆ ಭೂಮಾಲೀಕರಿಗೆ ತಗುಲಿದ ಕೂಡಲೇ ಅವರು ಗೇಣಿದಾರರನ್ನು ಬಲವಾಗಿ ಹೊರಹಾಕಿದ್ದಾರೆ ಮತ್ತು ಭೂಸ್ವಾಧೀನ ಪಡೆದಿದ್ದಾರೆ ಅಥವಾ ಸ್ವಾಧೀನ ಪಡೆಯದೇ ಹಕ್ಕು ದಾಖಲೆಯಲ್ಲಿ ತಮ್ಮ ಹೆಸರುಗಳನ್ನು ನೋಂದಾಯಿಸಿಕೊಂಡಿದ್ದಾರೆ. ಈ ಎಲ್ಲಾ ಕುತಂತ್ರವನ್ನು ಮಾಡಲಾಗಿದೆ. ಬೊಂಬಾಯಿ ಪ್ರಾಂತ್ಯಕ್ಕೆ ಸಂಬಂಧಿಸಿದಂತೆ, ಬಾಂಬೆ ಪ್ರದೇಶಕ್ಕೆ ಸಂಬಂಧಪಡುವಷ್ಟರಮಟ್ಟಿಗೆ ಈ ವಿವಿಧ ಕ್ರಮಗಳ ಅಡಿಯಲ್ಲಿ ಅಸಂಖ್ಯಾತ ಗೇಣಿದಾರರನ್ನು ಒಕ್ಕಲೆಬ್ಬಿಸಲಾಗಿದೆ ಎಂಬುದು ನನಗೆ ಚೆನ್ನಾಗಿ ಗೊತ್ತು. ಆ ದಿನಾಂಕವನ್ನು 10.9.1957 ಎಂದು ಪರಿಗಣಿಸಿದರೆ, ಆ ದಿನಾಂಕದಿಂದ ಆರು ವರ್ಷಗಳ ಮುಂಚೆ

ನಮ್ಮ ಪ್ರದೇಶದಲ್ಲಿ ಒಕ್ಕಲೆಬ್ಬಿಸಲಾದ ಎಲ್ಲ ಗೇಣಿದಾರರಿಗೆ ಖಂಡಿತವಾಗಿ ಯಾವುದೇ ಪರಿಹಾರವನ್ನು ನೀಡಿಲ್ಲ ಮತ್ತು ಈ ವಿಧೇಯಕವನ್ನು ಯಾವ ಉದ್ದೇಶಕ್ಕಾಗಿ ಮಾಡಲಾಯಿತೋ ಅದು ವಿಫಲವಾಗುತ್ತದೆ. ಈ ವಿಧೇಯಕದ ಪ್ರಭಾರದಲ್ಲಿರುವ ಮಾನ್ಯ ಸಚಿವರು ಏಕೆ ತತ್ವಗಳಿಗೆ ಬದ್ಧರಾಗಿಲ್ಲವೋ ನನಗೆ ತಿಳಿಯದು. ಇದೊಂದು ಗೇಣಿದಾರರ ಹಿತಾಸಕ್ತಿ ವಿರುದ್ಧದ ಹಿಮ್ಮುಖ ಕ್ರಮವಾಗಿದೆ. ಇದನ್ನು ನಾನು ವಿರೋಧಿಸುತ್ತೇನೆ.

**ಶ್ರೀ ಬಿ. ಶ್ಯಾಮಸುಂದರ್ (ಭಾಲ್ಕಿ):–** ಸ್ವಾಮಿ, ಈ ತಿದ್ದುಪಡಿಯನ್ನು ನಾನು ವಿರೋಧಿಸುತ್ತೇನೆ. ಯಾಕೆಂದರೆ, ಬಹುಸಂಖ್ಯಾತ ಗೇಣಿದಾರರ ವಿರುದ್ಧ ಇದನ್ನು ತರಲಾಗಿದೆ ಎಂದಲ್ಲ, ಆದರೆ, ಈ ಭೂ–ಸುಧಾರಣೆಗಳನ್ನು ಮಾಡಬೇಕೆಂದು ಕೋರಲಾದ ತತ್ವಗಳೇ ಇಲ್ಲಿ ಇಲ್ಲ. ಈ ಹಂತದಲ್ಲಿ, ನಾವು ಇದರ ಎಲ್ಲ ವ್ಯವಹಾರಗಳನ್ನು ನಿಲ್ಲಿಸಿ, ಎಲ್ಲಾ ಮೂಲೆಗಳಿಂದ ಗೇಣಿದಾರರ ಅಭಿಪ್ರಾಯಗಳನ್ನು ತಿಳಿದುಕೊಳ್ಳಲು ಈ ವಿಧೇಯಕವನ್ನು ಪರಿಚಲನೆಗೊಳಿಸುವ ಯೋಚನೆ ಮಾಡಬೇಕು. ಇದು ಒಬ್ಬರಿಗೆ ಅಥವಾ ಇಬ್ಬರಿಗೆ ತೊಂದರೆಯಾಗುವಂತದ್ದಲ್ಲ. ಲಕ್ಷಾಂತರ ಗೇಣಿದಾರರಿಗೆ ತೊಂದರೆಯಾಗುತ್ತದೆ. ಈ ಪಕ್ಷವು ಗೇಣಿದಾರರಿಗೆ ಎಲ್ಲ ರೀತಿಯ ವಾಗ್ದಾನವನ್ನು ಮಾಡಿತ್ತು ಈಗ ಅವರನ್ನು ನಿರ್ಲಕ್ಷಿಸಿದೆ. ಇದಕ್ಕೆ ಅವಕಾಶ ಕೊಡಲು ನಾವು ಬಯಸುವುದಿಲ್ಲ. ಮಾನ್ಯ ಕಂದಾಯ ಸಚಿವರು ತಮ್ಮ ವಿವೇಚನೆಯನುಸಾರ ಅಲ್ಲಿ ಕಾರ್ಯನಿರ್ವಹಿಸುವುದಿಲ್ಲ. ಆದರೆ, ಜನತೆ ಮತ್ತು ವ್ಯವಸಾಯಗಾರರನ್ನು ಪ್ರತಿನಿಧಿಸುವ ಪಕ್ಷದ ಇಚ್ಚೆಯನ್ನು ಪೂರೈಸುತ್ತೇನೆ ಎಂದು ತಿಳಿಸಿದ್ದಾರೆ. ಇದನ್ನು ನಾನು ವಿರೋಧಿಸುತ್ತೇನೆ. ಇದನ್ನು ಗೇಣಿದಾರರಲ್ಲಿ ಪರಿಚಲನೆಗೊಳಿಸಬೇಕೆಂದು ಮತ್ತು ಅಲ್ಲಿಯವರೆಗೂ ಈ ವಿಧೇಯಕಕ್ಕೆ ಸಂಬಂಧಿಸಿದ ಎಲ್ಲ ವ್ಯವಹಾರಗಳನ್ನು ನಿಲ್ಲಿಸಬೇಕು.

**ಶ್ರೀ ಜೆ.ಬಿ. ಮಲ್ಲಾರಾಧ್ಯ:–** ಸ್ವಾಮಿ, ಅಂಥ ತಿದ್ದುಪಡಿಗಳಲ್ಲಿನ ರೀತಿ–ನೀತಿಗಳ ಮೇಲೆ ಮಾನ್ಯ ಸಚಿವರು ಸಾಕಷ್ಟು ವಿವರ ಇಲ್ಲದೆ, ಈ ಸದನದಲ್ಲಿ ತಿದ್ದುಪಡಿಗಳನ್ನು ಮಂಡಿಸಿರುವ ರೀತಿಯಿಂದ ಆಯ್ಕೆ ಸಮಿತಿಯು ಮೂಲ ಉದ್ದೇಶಗಳನ್ನೇ ಕಡೆಗಣಿಸಲು ಪ್ರಯತ್ನಿಸಿದ್ದಾರೆ. ಸ್ವಾಮಿ, ಈಗ ಬೆಕ್ಕು ಚೀಲದಿಂದ ಹೊರಬಿದ್ದಂತಾಗಿದೆ. ಈ ತಿದ್ದುಪಡಿಗೆ ಮಾನ್ಯ ಸಚಿವರು ಜವಾಬ್ದಾರರಾಗಿರುವುದಿಲ್ಲ. ಇದನ್ನು ಪಕ್ಷದ ವಿಷಯವಾಗಿ ಮಾಡಬೇಕೆಂಬುದು ಸರಿಯೇ? ಮತ್ತು ಇದು ಬಹುಸಂಖ್ಯಾತ ಪಕ್ಷದ ಇಚ್ಛೆಯು ವಿರೋಧ ಪಕ್ಷಕ್ಕೂ ಇರಬೇಕೆಂದು ಹೇಳಬಹುದೇ? ಇದು ಸ್ವಲ್ಪಮಟ್ಟಿಗೆ ಕಣ್ಣೀರು ಸುರಿಸುವ ಕೆಲಸವಾಗಿದೆ. ದಿನಾಂಕಗಳನ್ನು ಅಮೂಲಾಗ್ರವಾಗಿ ಬದಲಾವಣೆ ಮಾಡಲು ಯಾವ ಅಂಥ ಒತ್ತಾಯದ ಸನ್ನಿವೇಶಗಳಿದ್ದವು ಎಂಬುದನ್ನು ಮಾನ್ಯ ಸಚಿವರು ವಿವರಿಸಬೇಕು. ಈ ಬದಲಾವಣೆಯಿಂದ ಗೇಣಿದಾರರ ಮೇಲೆ ಯಾವ ರೀತಿಯ ಪರಿಣಾಮವುಂಟಾಗಿದೆ ಎಂಬುದನ್ನು ಮಾನ್ಯ ಸಚಿವರು ವಿವರಿಸಬೇಕು. ಕಂದಾಯ ಸಚಿವರು ಮಾನ್ಯ ಮುಖ್ಯ ಮಂತ್ರಿಗಳಿಂದ ಅಥವಾ ನಿಯಂತ್ರಣವನ್ನು ಪಡೆದಿರುವ ಬೇರೆಯವರಿಂದ ಮಾರ್ಗದರ್ಶನ ಪಡೆದಿದ್ದರೆ, ಅದನ್ನು ಕೂಡ ಅವರು ಸದನಕ್ಕೆ ವಿವರಿಸಬೇಕು.

# ಭೂಸುಧಾರಣಾ ಕರಡು ಮಸೂದೆ ಚರ್ಚೆ

**ಶ್ರೀಮತಿ ನಾಗರತ್ನಮ್ಮ:–** ಧಾರ್ಮಿಕ ಸಂಸ್ಥೆಗಳವರು ಹದ್ದು ಮೀರಿ ವರ್ತಿಸುತ್ತಿದ್ದರೆ, ಅವರನ್ನು ಹದ್ದುಬಸ್ತಿಗೆ ತರಲು ಸಾರ್ವಜನಿಕರಿಗೂ ಹಕ್ಕಿದೆ, ಸರ್ಕಾರಕ್ಕೂ ಹಕ್ಕಿದೆ. ಇರುವ ಅಲ್ಪಸ್ವಲ್ಪ ಧಾರ್ಮಿಕ ಸಂಸ್ಕೃತಿಗೂ ಕೊಡಲಿಪೆಟ್ಟು ಹಾಕಿದರೆ ನಮಗೆ ಉಳಿಯುವುದು ನಶ್ಯದ ಡಬ್ಬಿ, ನಾಮದ ಬಿಲ್ಲೆ ಅಷ್ಟೆ. ಪ್ರಯುಕ್ತ ಇದು ರಾಷ್ಟ್ರೀಯ ಪ್ರಶ್ನೆ. ಇದನ್ನೂ ದೂರದೃಷ್ಟಿಯಿಂದ ಉದಾರತೆಯಿಂದ ನಾನು ನಮ್ಮ ಮಾನ್ಯ ಸಚಿವರಲ್ಲಿ ಹೇಳಬಯುಸುತ್ತೇನೆ.

ಇಂತಹುದೇ ಇನ್ನೊಂದು ಅನ್ಯಾಯ ವಿಧವೆ ಮತ್ತು ಅವಿವಾಹಿತ ಸ್ತ್ರೀಯರ ಬಗ್ಗೆ ಮಸೂದೆಯಲ್ಲಿ ವಿನಾಯಿತಿ ಇಲ್ಲದಿರುವುದು ತುಂಬಾ ಆಶ್ಚರ್ಯವಾಗಿದೆ. ಅಪ್ರಾಪ್ತ ವಯಸ್ಕರು, ಮಾನಸಿಕ ದೌರ್ಬಲ್ಯವುಳ್ಳವರು, ಸೈನಿಕರು ಇವರಿಗೆ ಗೇಣಿಗೆ ಕೊಡಲು ಅವಕಾಶ ಒದಗಿಸಿಕೊಡುವುದು ಯುಕ್ತವೆಂದು ನನ್ನ ಅಭಿಪ್ರಾಯ.

**ಶ್ರೀ ಬಿ. ಶ್ಯಾಮಸುಂದರ್ (ಭಾಲ್ಕಿ):–** ಸ್ವಾಮಿ, ಈ ವಿಧೇಯಕದ ಮೇಲೆ ನಾನು ಸ್ವಲ್ಪ ಹೇಳುವುದಿದೆ ಸಾಮಾನ್ಯ ಸ್ವರೂಪದ ಒಂದು ಅಥವಾ ಎರಡು ಅಂಶಗಳನ್ನು ಸದನದ ಗಮನಕ್ಕೆ ತರಬೇಕಾಗಿದೆ. ಸ್ವಾಮಿ ಕಂದಾಯ ಸಚಿವರು, ಜಾತ್ಯಾತೀತತೆಯ ಮೇಲೆ ಪ್ರಮಾಣವಚನ ಸ್ವೀಕರಿಸಿ ಸಂವಿಧಾನದ ಅಡಿಯಲ್ಲಿ ಕೆಲಸ ನಿರ್ವಹಿಸುತ್ತಾರೆ ಮತ್ತು ಸರ್ಕಾರಿ ದಾಖಲೆಗಳಲ್ಲಿ ದೇವರು ಎಂಬ ಶಬ್ದದ ಉಲ್ಲೇಖಗಳು ಇರಬಾರದೆಂದು ನಾವು ನಿರೀಕ್ಷಿಸುತ್ತೇವೆ. ಸಚಿವರು ಈ ಪ್ರಕ್ರಿಯೆಯಿಂದ ಪೂರ್ಣವಾಗಿ ಬೇರೆಯಾಗಿದ್ದಾರೆಂದು ತಿಳಿಸಲು ನಾನು ವಿಷಾದಿಸುತ್ತೇನೆ. ಯಾಕೆಂದರೆ. ಅವರು ಓದಿರುವ ಭಾಷಣದ ಕೊನೆಯ ವಾಕ್ಯಗಳಲ್ಲಿ ದೇವರ ಹೆಸರನ್ನು ತಂದಿದ್ದಾರೆ ಈ ಎಲ್ಲ ವಿಷಯಗಳಲ್ಲಿ ತುಳಿತಕ್ಕೊಳಗಾದವರ ಸ್ಥಿತಿಯಲ್ಲಿ ನಮ್ಮನ್ನು ಇಟ್ಟುಕೊಂಡಿದ್ದಾರೆ. ಧರ್ಮ ಮತ್ತು ದೇವರ ಹೆಸರಿನಲ್ಲಿ, ಮೇಲ್ವರ್ಗದವರು ಎಂದು ಕರೆಯಿಸಿಕೊಳ್ಳುವವರ ಕಪಿಮುಷ್ಠಿಯಲ್ಲಿ ನಾವು ಇದ್ದೇವೆ. ಕಡಿದಾಳ್ ಮಂಜಪ್ಪನವರು ದೇವರಿಂದ ಸಹಾಯವನ್ನು ಪಡೆಯಲು ಇಚ್ಛಿಸಿದ್ದಾರೆ. ಈ ವಿಷಯದಲ್ಲಿ ಅನವಶ್ಯಕವಾಗಿ ದೇವರನ್ನು ಮಧ್ಯೆ ತರುವ ಮತ್ತು ನಮ್ಮ ಚರ್ಚೆಗಳಲ್ಲಿ ಧರ್ಮಗಳನ್ನು ಸೇರಿಸಿಕೊಳ್ಳುವ ಈ ಪಾಪದ ಕೆಲಸವನ್ನು ಅವರು ಮಾಡಿದ್ದಾರೆಂದು ತಿಳಿಸಲು ನಾನು ವಿಷಾದಿಸುತ್ತೇನೆ. ಹಿಂದಿನ ಸರ್ಕಾರದ ಬಗ್ಗೆ ಈ ಸರ್ಕಾರವು ತೀವ್ರ ಟೀಕೆಗಳನ್ನು ಮಾಡಿದೆ. ಮತ್ತು 'ಸರ್ಕಾರದ ಕೆಲಸ ದೇವರ ಕೆಲಸ' ಎಂಬ ಪದಗಳನ್ನು ಅಳಿಸಿಹಾಕುವಲ್ಲಿ ಯಶಸ್ವಿಯಾಗಿದೆ. ಇದು ಸದನದ ಕಲಾಪಗಳನ್ನು ನಡೆಸುವಲ್ಲಿ ದೇವರ ಹೆಸರನ್ನು ಸೇರಿಸುವಂತಹ ಅದೇ ಕೆಲಸ ಮಾಡಬಾರದಿತ್ತು. ಇಲ್ಲಿಗೆ ನಾನು ಈ ವಿಷಯದ ಮಾತನ್ನು ನಿಲ್ಲಿಸುತ್ತೇನೆ.

ಸ್ವಾಮಿ, ಸಚಿವ ಸಂಪುಟಕ್ಕೆ ಈ ಸದನದ ಜವಾಬ್ದಾರಿ ಇದೆ. ನಾವು ಈ ಸದನದ ಮೂಲಕ ಅವರಿಗೆ ಒದಗಿಸುವ ವಿಷಯಗಳ ಮೇಲೆ ಮಾತ್ರ ಅವು ಕಾರ್ಯನಿರ್ವಹಿಸಬೇಕೆಂದು ನಿರೀಕ್ಷಿಸಲಾಗಿದೆ. ಅವರಿಗೆ ಸಲ್ಲಿಸಲಾದ ಮನವಿಯನ್ನು ಅಥವಾ ನಿಯಮಗಳ ಅನುಸಾರ ಈ ಸದನಕ್ಕೆ ನೀಡಲಾದ ಯಾವುದೇ ಅರ್ಜಿಯನ್ನು ಮಾತ್ರ ಆಯ್ಕೆ ಸಮಿತಿಯು ಪರಿಶೀಲಿಸಬೇಕು. ದೆಹಲಿಯಲ್ಲಿರುವ ಯೋಜನಾ ಆಯೋಗದಿಂದ ನೀಡಲಾದ ನಿರ್ದೇಶನಗಳ ಆಧಾರದ ಮೇಲೆ ಸಮಿತಿಯು ತೀರ್ಮಾನಗಳನ್ನು ತೆಗೆದುಕೊಳ್ಳುವ ಹಕ್ಕನ್ನು ಹೊಂದಿದೆಯೇ ಎಂಬ ಬಗ್ಗೆ ನಾನು ತಿಳಿದುಕೊಳ್ಳಬಯಸುತ್ತೇನೆ. ಆಯೋಗವು ಸದನಕ್ಕೆ ಅಥವಾ ಸಮಿತಿಗೆ ಯಾವುದೇ ಅರ್ಜಿಯನ್ನು ಸಲ್ಲಿಸಿದೆಯೇ ಮತ್ತು ಈ ಸದನಕ್ಕೆ ಅಭಿವೃದ್ಧಿ ಕೆಲಸಗಳ ಬಗ್ಗೆ ಏಕೆ ತಿಳಿಸಿಲ್ಲ ಎಂಬುದನ್ನು ನಾನು ತಿಳಿದುಕೊಳ್ಳಲು ಇಚ್ಛಿಸುತ್ತೇನೆ. ಈ ಸದನಕ್ಕೆ ಮುಖಾಮುಖಿಯಾಗಿ ಯೋಜನಾ ಆಯೋಗದ ಸ್ಥಾನಮಾನ ಏನು ಮತ್ತು ಈ ಸದನವು ಯೋಜನಾ ಆಯೋಗದ ಅಪೇಕ್ಷೆಗೆ ಅನುಸಾರವಾಗಿ ತಲೆಬಾಗಲು ಬದ್ಧವಾಗಿದೆಯೇ? ಎಂಬುದನ್ನು ನಾನು ತಿಳಿದುಕೊಳ್ಳಲಿಚ್ಛಿಸುತ್ತೇನೆ.

ಸ್ವಾಮಿ, ಈ ವಿಧೇಯಕವನ್ನು ಮಂಡಿಸಲು ಬಹಳ ಹಿಂದೆಯೇ ಯೋಚಿಸಲಾಗಿತ್ತು. ಸ್ವಾತಂತ್ರ್ಯಪೂರ್ವದಲ್ಲಿ ಕೂಡ ಭೂಸುಧಾರಣೆಯ ವಿಚಾರವು ಕಾಂಗ್ರೇಸಿನವರ ಮನಸ್ಸಿನಲ್ಲಿತ್ತೋ ಅದೇ ರೀತಿ ಈ ವಿಧೇಯಕವನ್ನು ಎರಡು ವರ್ಷಗಳ ಹಿಂದೆ ಮಂಡಿಸಲಾಯಿತು. ಎರಡು ವರ್ಷಗಳ ದೀರ್ಘ ಕಾಲದ ನಂತರವೂ ಯಾವುದೇ ಕೆಲಸ ಆಗಲಿಲ್ಲ. ಎರಡು ವರ್ಷಗಳು ಪ್ರಸವ ವೇದನೆಯನ್ನು ಅನುಭವಿಸಿದ ತರುವಾಯ ಒಂದು ಸತ್ತ ಇಲಿಗೆ ಜನ್ಮ ನೀಡಿದಂತಾಯಿತು. ಅಂದರೆ ಈ ವಿಧೇಯಕವು ಹಳೆಯದಾಗಿದೆ. ಹದಿಮೂರು ವರ್ಷಗಳ ಕಾಂಗ್ರೇಸ್ ಆಡಳಿತವು ಭೂ ಸುಧಾರಣೆಯ ಎಲ್ಲ ಮಾತುಗಳು ವಿಫಲವಾಗುವಂತೆ ಮಾಡುವ ರೀತಿಯಲ್ಲಿ ಆಡಳಿತ ವ್ಯವಹಾರಗಳನ್ನು ನಿರ್ವಹಿಸಿ ಹಣವಂತರು ಮತ್ತು ಭೂ ಆಸ್ತಿ ಉಳ್ಳವರು ಕೈಗೆ ಕೈಜೋಡಿಸಿದ್ದಾರೆ. ಅವರು ಸಾಕಷ್ಟು ಸಮಯವನ್ನು ವ್ಯಯಿಸಲು ಅವಕಾಶ ಮಾಡಿಕೊಟ್ಟು, ಭೂ ಸುಧಾರಣೆಗಳ ಪರಿಣಾಮಕಾರಿ ಕಾರ್ಯಾಚರಣೆಯನ್ನೇ ಹೂತುಹಾಕಿದ್ದಾರೆ.

ಸಚಿವರು ಉತ್ತರಗಳನ್ನು ಕಟುವಾಗಿ ನೀಡಿದ್ದಾರೆ. ಈ ಸುಧಾರಣೆಗಳಿಂದ ಹೆಚ್ಚಿನ ಕೃಷಿ ಉತ್ಪಾದನೆ ಉಂಟಾಗುತ್ತದೆಯೇ? ಇಲ್ಲ; ಭೂಸುಧಾರಣೆಗಳು, ವ್ಯಾಜ್ಯಕ್ಕೆ ಮಂಗಳ ಹಾಡುತ್ತವೆಯೇ? ಇಲ್ಲ; ಅವು ವ್ಯಾಜ್ಯಗಳನ್ನು ಇನ್ನೂ ಹೆಚ್ಚಿಸುತ್ತವೆ. ಕಾಂಗ್ರೆಸ್ಸು ಅಳವಡಿಸಿದ ಎಲ್ಲ ಸುಧಾರಣೆಗಳು, ರಾಷ್ಟ್ರದಲ್ಲಿ ಗೊಂದಲ ಮತ್ತು ತೊಂದರೆಯನ್ನು ಸೃಷ್ಟಿಸಿವೆ ಎಂಬುದು ದುರದೃಷ್ಟಕರ. ಉದಾಹರಣೆಯಾಗಿ ತೆಗೆದುಕೊಂಡರೆ, ರಾಜ್ಯಗಳ ಪುನರ್‌ವಿಂಗಡಣೆ ಮತ್ತು ದೇಶದ ಭಾಷಾವಾರು ವಿಭಜನೆ. ಇದರಿಂದ ಇನ್ನಷ್ಟು ತೊಂದರೆ ಉಂಟಾಗಿ ಅಸಂಖ್ಯಾತ ಸಮಸ್ಯೆಗಳು ಸೃಷ್ಠಿಯಾಗಿವೆ. ಅದೇ ರೀತಿಯಲ್ಲಿ ಭೂಸುಧಾರಣೆಗಳು ಜನತೆಯ ಕಷ್ಟಗಳು ಮತ್ತು ಕ್ಲೇಷಗಳಿಗೆ ಇನ್ನಷ್ಟು ಯಾತನೆಯನ್ನು ಸೇರಿಸಿವೆ. ನಾನು ಈ ವಿಧೇಯಕಕ್ಕೆ ತಿದ್ದುಪಡಿಗಳನ್ನು ಮಾಡಿದ್ದೇನೆ. ಅವುಗಳನ್ನು ಒಪ್ಪಿಕೊಂಡರೆ, ಭೂಸುಧಾರಣೆಗಳ ಉದ್ದೇಶಗಳನ್ನು ಸಾಕಾರಗೊಳಿಸುವ ನಿಟ್ಟಿನೆಡೆಗೆ ನಾವು ಸಾಗುತ್ತೇವೆ. ಎಲ್ಲ ಸಣ್ಣ

ಮತ್ತು ಭಾರಿ ಕೈಗಾರಿಕೆಗಳಂತೆ, ಕೃಷಿಯು ಒಂದು ರಾಜ್ಯ ಕೈಗಾರಿಕೆಯಾಗಬೇಕು. ಈಗಿರುವ ಭೂ ಹಿಡುವಳಿದಾರರನ್ನು ಗೇಣಿದಾರರು ಅಥವಾ ಅಡಮಾನ ಪಡೆದವರು ಎಂಬುದಾಗಿ ಪರಿಗಣಿಸತಕ್ಕದ್ದು ಮತ್ತು ಜಮೀನಿನಲ್ಲಿನ ಅವನ ಹಕ್ಕಿಗೆ ಸಮಾನವಾದ ಪರಿಹಾರವನ್ನು ಡಿಬೆಂಚರುಗಳ ರೂಪದಲ್ಲಿ ಅವರಿಗೆ ಸಂದಾಯ ಮಾಡಬಹುದು. ಈ ಯೋಜನೆಯ ಜಮೀನ್ದಾರರು ಗೇಣಿದಾರರು, ಭೂರಹಿತ ಕಾರ್ಮಿಕರು ಇರಬಾರದೆಂದು ನಾನು ಸಲಹೆ ಮಾಡಿದ್ದೇನೆ.

**ಡಾ: ಆರ್ ನಾಗನಗೌಡ:–** ಸರ್ಕಾರವು ಭೂಮಿಗಳನ್ನು ತೆಗೆದುಕೊಂಡು ಮತ್ತು ಡಿಬೆಂಚರುಗಳನ್ನು ನೀಡಿ ಅದಕ್ಕೆ ಬಡ್ಡಿಯನ್ನು ಪಾವತಿ ಮಾಡಿದರೆ ಆಗ ಉಂಟಾಗುವ ಹಣಕಾಸಿನ ಬದ್ಧತೆ ಬಗ್ಗೆ ನನ್ನ ಸ್ನೇಹಿತರಿಗೆ ಏನಾದರೂ ತಿಳಿದಿದೆಯೇ?

**ಶ್ರೀ ಬಿ. ಶ್ಯಾಮಸುಂದರ್:–** ಆ ಪ್ರಶ್ನೆಗೆ ನಾನು ಉತ್ತರ ನೀಡುತ್ತೇನೆ. ಸ್ವಾಮಿ, ನಾವು ಜೀವಿಸುತ್ತಿರುವ ಈ ಶತಮಾನದಲ್ಲಿ ಕೃಷಿ ಸೇರಿದಂತೆ ಎಲ್ಲ ಕ್ಷೇತ್ರಗಳಲ್ಲಿ ತೀವ್ರ ಪೈಪೋಟಿ ಇದೆ. ಕೃಷಿಯಲ್ಲಿ ತಜ್ಞರಾದ ಮಾನ್ಯ ಮಾರ್ಷಲ್ ಅವರು ಜಮೀನುಗಳ ತುಂಡೀಕರಣದಿಂದ ದೇಶವು ಆರ್ಥಿಕವಾಗಿ ಹಾಳಾಗುತ್ತದೆಂದು ಹೇಳಿದ್ದಾರೆ. ಯೋಜನಾ ಆಯೋಗ ಮತ್ತು ನಮ್ಮ ಆಡಳಿತಗಾರರ ವಿಚಾರ ನನಗೆ ಗೊತ್ತಿದೆ. ಇಲ್ಲಿ ಒಂದು ಅಥವಾ ಎರಡು ಎಕರೆ ಜಮೀನಿರುವ ಬಡ ರೈತರನ್ನು ನಿಂದಿಸುತ್ತಾರೆ. ಆದ್ದರಿಂದ ಅವರು ತಮ್ಮ ಭವಿಷ್ಯದ ಸುಧಾರಣೆಗಾಗಿ ಪರಿಹಾರವನ್ನು ಕಂಡುಕೊಳ್ಳಲಾಗುವುದಿಲ್ಲ. ಕಾರ್ಮಿಕರು ಈಗ ಹೇಗಿದ್ದಾರೋ ಹಾಗೇ ಇರಲು ನೀವು ಇಚ್ಛಿಸುತ್ತೀರಿ ಮತ್ತು ಅವರ ಸ್ಥಿತಿಯನ್ನು ಇನ್ನೂ ಅಧೋಗತಿಗಿಳಿಸುತ್ತೀರಿ. ಕೃಷಿಯ ಬಗ್ಗೆ ತಿಳುವಳಿಕೆ ಇರುವ ಎಲ್ಲರೂ ದೊಡ್ಡ ಪ್ರಮಾಣದಲ್ಲಿ ಜಂಟಿ ಉತ್ಪಾದನೆಗೆ ಸಲಹೆ ಮಾಡಿದ್ದಾರೆ. ಆದರೆ, ನೀವು ವಿಭಜಿಸಿದ ಭೂಮಿಗಳನ್ನು ಇನ್ನೂ ಸಣ್ಣ ಸಣ್ಣ ತುಂಡುಗಳನ್ನಾಗಿ ಮಾಡಲು ಇಚ್ಛಿಸುತ್ತೀರಿ. ಈ ವಿಚಾರವು 13 ವರ್ಷಗಳ ಹಿಂದೆ ಚೆನ್ನಾಗಿತ್ತು, ಆದರೆ, ಅಲ್ಲಿಂದ ಕೃಷಿಯ ವಿಚಾರದಲ್ಲಿ ಬದಲಾವಣೆಯಾಗಿದೆ. ಸಣ್ಣ ಸಣ್ಣ ಜಮೀನುಗಳಲ್ಲಿ, ಕೃಷಿ ಉತ್ಪನ್ನವನ್ನು ಹೆಚ್ಚಿಸುವುದು ಮಾದರಿ ಕಾರ್ಯವಲ್ಲ. ಸರ್ಕಾರಕ್ಕೆ ಎಷ್ಟು ವೆಚ್ಚ ತಗುಲಬಹುದೆಂಬುದನ್ನು ಲೆಕ್ಕ ಹಾಕುವಂತೆ ಡಾ. ನಾಗನಗೌಡರು ನನಗೆ ತಿಳಿಸಿದ್ದಾರೆ. ಅವರು ಕೃಷಿಕರಾಗಿದ್ದಾರೆ ಮತ್ತು ನಾನು ಏನು ಹೇಳುತ್ತೇನೆಂಬುದು ಅವರಿಗೆ ಗೊತ್ತಿದೆ. ಮುಖ್ಯವಾಗಿ, ಅವರು ತಾತ್ವಿಕವಾಗಿ ಒಪ್ಪಿಕೊಳ್ಳಲಿ, ಆಗ ನಾವು ಒಟ್ಟಿಗೆ ಕೂತು ಲೆಕ್ಕಹಾಕಬಹುದು. ಡಾ. ನಾಗನಗೌಡ–ಲಿಪಿಕರ ತೀರ್ಮಾನಗಳಿಗೆ ಬದ್ಧರಾಗಿ ಗೆರೆಯ ಮೇಲೆ ಸಹಿ ಮಾಡುವ ರೂಢಿಯುಳ್ಳವರಾಗಿದ್ದಾರೆ.

**ಮಾನ್ಯ ಸಭಾಧ್ಯಕ್ಷರು:–** ನಾವು ವಿರಾಮಕ್ಕಾಗಿ ಸದನವನ್ನು ಮಧ್ಯಾಹ್ನ 3.00 ಗಂಟೆಗೆ ಮುಂದೂಡಿದ್ದೇವೆ.

*ವಿರಾಮಕ್ಕಾಗಿ ಸದನವನ್ನು ಮೂರು ಗಂಟೆಗೆ ಮುಂದೂಡಲಾಗಿದೆ ಮತ್ತು ಮೂರು ಗಂಟೆ ಮೂವತ್ತು ನಿಮಿಷ ಸಮಯಕ್ಕೆ ಸಭೆ ಸೇರಲಾಗುವುದು.*

[ಅಧ್ಯಕ್ಷ ಸ್ಥಾನದಲ್ಲಿ ಸಭಾಧ್ಯಕ್ಷರು]

**ಶ್ರೀ ಬಿ. ಶ್ಯಾಮಸುಂದರ್**:- ಸ್ವಾಮಿ ನನ್ನ ಸಲಹೆಯನ್ನು ಅಳವಡಿಸಿಕೊಂಡರೆ ಹೆಚ್ಚು ಹಣ ಖರ್ಚು ಮಾಡಬೇಕಾಗುವುದಿಲ್ಲವೆಂದು ಮಾನ್ಯ ಶ್ರೀ ಡಾ: ನಾಗನಗೌಡರು ನನಗೆ ಕೇಳಿದ್ದಾರೆ. ನೀವು ಯಾವಾಗ ದೊಡ್ಡ ಯೋಜನೆಗಳನ್ನು ಕಾರ್ಯಗತಗೊಳಿಸಲು ಬಯಸುತ್ತೀರಿ ಆಗ ಹಣದ ವಿಷಯ ಸೂಚನೆ ಮಾಡುವುದಿಲ್ಲ. ಈ ದೇಶದಲ್ಲಿ ದೊಡ್ಡ ಯೋಜನೆಗಳನ್ನು ಕಾರ್ಯಗತಗೊಳಿಸಲು ಹಣ ಸಂಗ್ರಹಿಸಲಾಗದಿದ್ದರೆ, ನೀವು ವಿದೇಶಕ್ಕೆ ಹೋಗುತ್ತೀರಿ, ಅಲ್ಲಿಂದ ಸಾಲ ತರುತ್ತೀರಿ ಮತ್ತು ನಿಮ್ಮ ಯೋಜನೆಗಳನ್ನು ಕಾರ್ಯಗತಗೊಳಿಸುತ್ತೀರಿ. ಇಲ್ಲಿ ರಾಜ್ಯದಲ್ಲಿ ಫಾರಂಗಳನ್ನು ಸ್ಥಾಪಿಸಲು ಯೋಜನಾ ಆಯೋಗಕ್ಕೆ ಅಮೇರಿಕಾ ಸರ್ಕಾರದಿಂದ ಪ್ರಸ್ತಾವನೆ ಬಂದಿದೆ ಎಂದು ಖಚಿತವಾಗಿ ನನಗೆ ಗೊತ್ತು. ಇಲ್ಲಿ ಸ್ಥಾಪಿಸಿದ ತರುವಾಯ ಅವುಗಳನ್ನು ಭಾರತ ಸರ್ಕಾರಕ್ಕೆ ವಹಿಸಿಕೊಡಲು ಅವರು ಇಚ್ಛಿಸಿದ್ದಾರೆ. ನಮ್ಮ ಸರ್ಕಾರ ಇದನ್ನು ನಿರಾಕರಿಸಿದೆ ಎಂದು ಹೇಳಲು ನಾನು ವಿಷಾದಿಸುತ್ತೇನೆ. ಈ ಸುದ್ದಿಗಳು ಕೆಲವು ವೃತ್ತಪತ್ರಿಕೆಗಳಲ್ಲಿ ಮತ್ತು ನಿಯತಕಾಲಿಕಗಳಲ್ಲಿ ಪ್ರಕಟವಾಗಿತ್ತು. ಈ ವಿಧೇಯಕಗಳು ಮತ್ತು ಕ್ರಮಗಳು ಹಳೆಯವು ಮತ್ತು ನೀವು ತೆಗೆದುಕೊಂಡ ಕ್ರಮಗಳು ಹಳೆಯದಾಗಿವೆ ಮತ್ತು ನಾವು ಬೇರೆ ರಾಷ್ಟ್ರಗಳ ಉತ್ಪಾದನೆಯೊಂದಿಗೆ ಪೈಪೋಟಿ ನಡೆಸುವಷ್ಟು ಸಮರ್ಥರಾಗಿಲ್ಲ ಎಂಬುದನ್ನು ನಾನು ನಿಮಗೆ ತಿಳಿಸಲಿಚ್ಛಿಸುತ್ತೇನೆ ಮತ್ತು ಇದನ್ನು ನಾವು ನಮ್ಮ ಸ್ವಂತ ಜಮೀನುಗಳಲ್ಲಿ ಮಾಡುತ್ತೇವೆ. ಇದಕ್ಕಾಗಿ ನಮ್ಮ ಬಂಜರು ಭೂಮಿಗಳನ್ನು ಬಳಸಿಕೊಳ್ಳುತ್ತೇವೆ. ಭೂಮಿಯ ತುಣುಕುಗಳು, ಭೂಮಿಯ ವಿಭಜನೆ, ವಂಶಪಾರಂಪರ್ಯ ಜಮೀನುಗಳಂಥ ಕೆಲವು ಪದಗಳಿಗೆ ನೀವು ಯಾವ ರೀತಿ ವ್ಯಾಖ್ಯಾನಗಳನ್ನು ಕೊಡುತ್ತೀರಿ? ಉದಾಹರಣೆಗಾಗಿ, ವೈಯಕ್ತಿಕ ಸಾಗುವಳಿ ಎಂಬ ಪದದ ವ್ಯಾಖ್ಯಾನವು, ಕುತೂಹಲಕಾರಿಯಾಗಿದೆ. ಇದು ಆರ್ಥಿಕವಾಗಿ ತುಂಬಾ ಕೆಟ್ಟದ್ದಾಗಿದೆ ಮತ್ತು ಇದು ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಪದ ಎಂದು ಹೇಳಲಾಗದು. ನಾನು ಇದರ ವಿವರದ ಬಗ್ಗೆ ತಿಳಿದುಕೊಳ್ಳಲಿಚ್ಛಿಸುವುದಿಲ್ಲ. ನನಗೆ ನೆನಪಿರುವುದೆಂದರೆ, ಯಾರೇ ವ್ಯಕ್ತಿಯು ತನ್ನ ಏಜಂಟನ ಅಥವಾ ಕಾರ್ಮಿಕರ ಅಥವಾ ಗೇಣಿದಾರರ ಮೂಲಕ ವೈಯಕ್ತಿಕವಾಗಿ ಸಾಗುವಳಿ ಮಾಡಬಹುದು. ನೀವು ಅವಧಿ ಕಾಂಗ್ರೆಸ್‌ನಲ್ಲಿನ ಒಂದು ನಿರ್ಣಯದಲ್ಲಿ "ಉಳುವವನಿಗೆ ಭೂಮಿ" ಎಂಬ ಪರಿಕಲ್ಪನೆಯನ್ನು ತುಂಬಿದಿರಿ. ಭೂಸುಧಾರಣೆಯ ಬಗ್ಗೆ ನಾನು ಒಂದು ಉದಾಹರಣೆಯನ್ನು ಕೊಡುತ್ತೇನೆ; ಕೆಲವು ಮಂದಿರಗಳಲ್ಲಿ, ಅಂದರೆ, ದೇವಸ್ಥಾನದಲ್ಲಿ ದೇವರು ಇರುತ್ತಾನೆ, ಅದನ್ನು ಎಲ್ಲರೂ ಆರಾಧಿಸುತ್ತಾರೆ. ಅಲ್ಲಿಗೆ ಯಾರೇ ಬಂದರೂ ದೇವರಿಗೆ ಕೆಲವೊಂದು ವಸ್ತುಗಳನ್ನು ಕಾಣಿಕೆಯಾಗಿ ಅರ್ಪಿಸುತ್ತಾರೆ. ಒಂದು ದಿನ, ಆ ದೇವರು ಪೂಜಾರಿಯನ್ನು ಕೇಳಿತಂತೆ, ನೀನು ಅಸಾಧ್ಯ ಪುರುಷ, ನನ್ನಲ್ಲಿಗೆ ಯಾರೇ ಬಂದರೂ, ಕೆಲವೊಂದು ವಸ್ತುಗಳನ್ನು ನನಗೆ ಅರ್ಪಿಸುತ್ತಾರೆ, ಆದರೆ ನೀನು ಇಲ್ಲಿಯವರೆಗೆ ಏನನ್ನೂ ಕಾಣಿಕೆಯಾಗಿ ಅರ್ಪಿಸಲಿಲ್ಲ ಏನು ವಿಷಯ? ಆಗ ಪೂಜಾರಿ ಚಾಕುವನ್ನು ತೆಗೆದುಕೊಂಡು ದೇವರ ಮೂಗನ್ನು ಕೊಯ್ದು ಅದನ್ನು ದೇವರಿಗೆ ಅರ್ಪಿಸಿದನಂತೆ, ಅದೇ ರೀತಿಯಲ್ಲಿ, ಜನರ, ರೈತರ ಗಂಟಲನ್ನು ಕೊಯ್ದು ಅದನ್ನೇ ನೀವು ಅವರಿಗೆ ದಾನವಾಗಿ ಕೊಡುತ್ತೀರಿ. ಇದು ಯಾವ ಭೂಸುಧಾರಣೆ? ಭೂಸುಧಾರಣೆಯ ನಿಜವಾದ ಪರಿಕಲ್ಪನೆ ಎಂದರೆ

ಊಳುವವನಿಗೆ ಭೂಮಿಯನ್ನು ಕೊಡುವುದು. ಒಬ್ಬ ಗೇಣಿದಾರ ಅಥವಾ ಭೂರಹಿತ ಕಾರ್ಮಿಕ ಇರಬಾರದು. ಆದರೆ ಇಲ್ಲಿ ನೀವು ಭೂರಹಿತ ಕಾರ್ಮಿಕರನ್ನು, ಭೂಮಿ ಸಾಗುವಳಿ ಮಾಡದಿರುವ ಗೇಣಿದಾರರನ್ನು ಮತ್ತು ಜಮೀನ್ದಾರರನ್ನು ಉಳಿಸಿಕೊಂಡಿದ್ದೀರಿ, ಇದರ ಪರಿಣಾಮವಾಗಿ, ಇಡೀ ಪರಿಕಲ್ಪನೆಯೇ ಕಲುಷಿತವಾಗಿದೆ. ಇದು ಭೂಸುಧಾರಣೆಯಾಗುವುದಿಲ್ಲ. ಕೇವಲ ಜನರನ್ನು ಬಂಧನದಲ್ಲಿ ಇಟ್ಟುಕೊಳ್ಳುವ ಸಲುವಾಗಿ ನೀವು ಇದನ್ನು ಮಂಡಿಸಿದ್ದೀರಿ. ಜನರನ್ನು ಕೇವಲ ನಿಮ್ಮ ಕೈಮುಷ್ಠಿಯಲ್ಲಿ ಇಟ್ಟುಕೊಂಡು, ನಿಮಗೆ ಇಷ್ಟವೆನಿಸಿದ ರೀತಿಯಲ್ಲಿ ಅವರಿಗೆ ಮಾರ್ಗದರ್ಶನ ಮಾಡುತ್ತೀರಿ. ನಾನು ಹೆಚ್ಚಿಗೆ ಹೇಳಲು ಬಯಸುವುದಿಲ್ಲ. ಯಾಕೆಂದರೆ, ಈ ವಿಧೇಯಕದ ವಿಷಯವನ್ನೇ ನಾನು ಒಪ್ಪುವುದಿಲ್ಲ. ನಾವು ಆರ್ಥಿಕವಾಗಿ ಹಾಳಾಗುವ ಮುಂಚೆ, ಏನಾದರೂ ಹೊಸದನ್ನು, ಆಮೂಲಾಗ್ರ ಸುಧಾರಣೆಯನ್ನು ತರಬೇಕೆಂದು ನಾನು ಬಯಸಿದ್ದೇನೆ.

(ಅಧ್ಯಕ್ಷ ಸ್ಥಾನದಲ್ಲಿ ಉಪ ಸಭಾಧ್ಯಕ್ಷರು)

ನಾನು ಈ ಒಂದು ವಿಚಾರವನ್ನು ಮಾತ್ರ ನಿಮ್ಮ ಮುಂದೆ ಇಡುತ್ತೇನೆ. ನಮ್ಮ ದೇಶವು ಒಂದು ಕೃಷಿ ದೇಶವಾಗಿದೆ. ಇದು ವಾಸ್ತವವಾದ ವಿಷಯ. ಸರ್ಕಾರದ ಪ್ರತಿನಿಧಿಗಳು ಹೋದ ಕಡೆಯಲ್ಲೆಲ್ಲ ಹೇಳಿಕೆಗಳನ್ನು ನೀಡುತ್ತಾರೆ. ಅವರು ಇದೊಂದು ಕೃಷಿ ದೇಶವೆಂದು ಹೇಳುತ್ತಾರೆ. ಯೋಜನಾ ಆಯೋಗದ ವರದಿಯ ಅನುಸಾರ ಶೇಕಡಾ 80ರಷ್ಟು ಜನರು ಕೃಷಿಕರಾಗಿದ್ದಾರೆ. ಈ ಶೇಕಡಾ 80ರಲ್ಲಿ ಶೇಕಡಾ 20ರಿಂದ 23ರಷ್ಟು ಭೂರಹಿತ ಕೃಷಿಕರಿದ್ದಾರೆ. ಈ ಭೂರಹಿತ ಕಾರ್ಮಿಕರು ಬಹುತೇಕ ಪರಿಶಿಷ್ಟ ಜಾತಿಯ ಜನರಾಗಿದ್ದಾರೆ. ಈ ಸರ್ಕಾರವನ್ನು ಆಳುತ್ತಿರುವ ಜನರು ಅಥವಾ ಸಮುದಾಯ ಅಥವಾ ಅವರ ತಾತ ಮುತ್ತಾತಂದಿರು ಅಥವಾ ತಮ್ಮ ಧಾರ್ಮಿಕ ನಂಬಿಕೆಯ ಕಾರಣದಿಂದಾಗಿ, ಮತ್ತು ತಮ್ಮ ಧಾರ್ಮಿಕ ಸಂಪ್ರದಾಯದ ಕಾರಣದಿಂದಾಗಿ, ಮನುಧರ್ಮ ಇತ್ಯಾದಿಗಳ ಕಾರಣದಿಂದಾಗಿ, ಹಿಂದಿನಿಂದಲೂ ಇಲ್ಲಿ ವಾಸವಾಗಿರುವ ಜನರು ಶತ ಶತಮಾನಗಳಿಂದಲೂ ಈ ಜನರನ್ನು ಭೂಮಿಯಿಂದ ದೂರ ಉಳಿಸಿ ಭೂರಹಿತ ಕಾರ್ಮಿಕರಾಗಿರುವಂತೆ ಇಟ್ಟಿದ್ದಾರೆ. ಇತ್ತೀಚೆಗೆ, ದೆಹಲಿ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದ ಶ್ರೀ ವಿ.ಕೆ.ಆರ್.ವಿ. ರಾವ್, ಅವರು ಒಂದು ಲೇಖನವನ್ನು ಬರೆದಿದ್ದಾರೆ. ಅದು, 'ಭೂಸುಧಾರಣೆ ಮತ್ತು ಪರಿಶಿಷ್ಟ ಜಾತಿಗಳು' ಎಂಬ ವಿಷಯದ ಬಗ್ಗೆ, ಅದನ್ನು ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಶೇಕಡಾ 22ರಷ್ಟು ಈ ಜನರಿಗೆ ಭೂಮಿಯನ್ನು ನೀಡಲಾಗಿದೆ ಎಂದು ಹೇಳಿದ್ದಾರೆ. ಈ ಕೆಲಸವನ್ನು ಎರಡು ವರ್ಗಗಳಲ್ಲಿ ಮಾಡಬೇಕಾಗಿದೆ. ಇವರು ನನ್ನ ಪ್ರಸ್ತಾವನೆಯನ್ನು ಒಪ್ಪಿದ್ದಾರೆ. ನೀವು ಭೂಸುಧಾರಣೆಯನ್ನು ಅನುಷ್ಠಾನಕ್ಕೆ ತರಲು ಬಯಸಿದರೆ, ಅಸ್ಪೃಶ್ಯರಾಗಿರುವ ಪರಿಶಿಷ್ಟ ಜಾತಿಯ ಜನರಿಗೆ ಭೂಮಿಯನ್ನು ನೀಡುವ ಕೆಲಸವನ್ನು ನೀವು ಮೊದಲು ಮಾಡಬೇಕಾಗಿದೆ. ಆದ್ದರಿಂದ, ಇದು ಎರಡು ಉದ್ದೇಶಗಳನ್ನು ಈಡೇರಿಸುತ್ತದೆ – ಒಂದು ಸಾಮಾಜಿಕವಾಗಿ ಮತ್ತೊಂದು ಆರ್ಥಿಕವಾಗಿ. ಈ ರೀತಿಯಾಗಿ, ಅಸ್ಪೃಶ್ಯತೆ ಎಂಬ ಪಿಡುಗು ಅಳಿಸಿಹೋಗುತ್ತದೆ. ಅವರೆಲ್ಲರಿಗೂ ತಾವು ಈ 'ಮಣ್ಣಿನ ಮಕ್ಕಳು' ಎಂಬ ಭಾವನೆ ಬರುತ್ತದೆ. ಆದರೆ, ನಮ್ಮ ಈ ವಿಚಿತ್ರ ಸರ್ಕಾರವು ಒಂದು ವರ್ಷದ ಹಿಂದೆ ಕೆಲವು ಭೂ ಹಂಚಿಕೆ

ನಿಯಮಗಳನ್ನು ಹೊರಡಿಸಿದೆ. ಶ್ರೀ ಕಡಿದಾಳ್ ಮಂಜಪ್ಪನವರೇನು ಇದರ ಕರ್ತೃವಲ್ಲವೆಂದು ನಾವು ಭಾವಿಸಿದ್ದೇವೆ. ಆದರೆ, ಅವರು ಇದಕ್ಕೆ ಸಹಿ ಮಾಡಿದ್ದಾರೆ. ಆದ್ದರಿಂದ, ಇದಕ್ಕೆ ಅವರು ಬದ್ಧರಾಗಿದ್ದಾರೆ. ಈಗಿರುವ ಸರ್ಕಾರದ ಬಂಜರು ಭೂಮಿಯಲ್ಲಿ ಶೇಕಡಾ 50ರಷ್ಟು ಉನ್ನತ ಜಾತಿಯ ಹಿಂದುಗಳಿಗೆ ಹೋಗುತ್ತದೆಂದು, ಇನ್ನು ಉಳಿದ ಅರ್ಧ ಭಾಗ ಪರಿಶಿಷ್ಟ ಜಾತಿಯ ಜನರಿಗೆ ಹೋಗುತ್ತದೆಂದು ಈ ನಿಯಮಗಳು ಹೇಳುತ್ತವೆ.

**ಶ್ರೀ ಕಡಿದಾಳ್ ಮಂಜಪ್ಪ:**– ಅವರ ಪ್ರಕಾರ ಶೇಕಡಾ 60ರಷ್ಟು ಪರಿಶಿಷ್ಟ ಜಾತಿ ಜನರಿಗೆ ಹೋಗುತ್ತದೆ.

**ಶ್ರೀ ಬಿ. ಶ್ಯಾಮಸುಂದರ್:**– ನಾನು ಈ ವಿಷಯವನ್ನು ವಿವರವಾಗಿ ಚರ್ಚಿಸಬಯಸುವುದಿಲ್ಲ. ಏಕೆಂದರೆ, ಅವುಗಳ ಬಗ್ಗೆ ಮಂತ್ರಿಗಳಿಗೆ ಗೊತ್ತಿದೆ. ನಿಮ್ಮ ಈ ನಿಯಮಗಳಿಂದಾಗಿ ಬಹುತೇಕ ಪರಿಶಿಷ್ಟ ಜಾತಿಯ ಜನರಿರುವ ಶೇಕಡಾ 20ರಷ್ಟು ಭೂರಹಿತ ಜನರಿಗೆ ತೊಂದರೆಯಾಗುತ್ತಿದೆ, ಮತ್ತೊಂದು ವಿಷಯ ಎಂದರೆ, ಅವರ ಸ್ವಂತ ಜಮೀನಿಗೆ ಹೊಂದಿಕೊಂಡಿರುವ ಭೂಮಿಯನ್ನು ಸ್ವಾಧೀನಪಡಿಸಿಕೊಂಡಿರುವ ಯಾರೇ ಜಮೀನ್ದಾರನು ಆ ಜಮೀನಿನಲ್ಲಿ ಸಾಗುವಳಿ ಮಾಡಿ ಅದರ ಪಟ್ಟಾವನ್ನು ತನ್ನ ಹೆಸರಿಗೆ ಮಾಡಿಸಿಕೊಳ್ಳಬಹುದು.

**ಶ್ರೀ ಕಡಿದಾಳ್ ಮಂಜಪ್ಪ:**– ಅದು ಹಾಗಲ್ಲ, ಸುತ್ತೋಲೆ ಹೊರಡಿಸಿರುವುದು ಜಮೀನ್ದಾರರು ಅವರ ಜಮೀನಿನ ಎಲ್ಲೆ ಗುರುತುಗಳನ್ನು ತಿಳಿಯದೆ ಕೆಲವು ಗುಂಟೆಗಳಷ್ಟು ಭೂಮಿಯನ್ನು ಸ್ವಾಧೀನಪಡಿಸಿಕೊಂಡಿದ್ದಾರೆ. ಪ್ರತಿಯೊಂದು ಪ್ರಕರಣವನ್ನು ಅದರ ಅರ್ಹತೆಯ ಮೇಲೆ ಸಹಾನುಭೂತಿಯಿಂದ ಪರಿಗಣಿಸಬಹುದು ಎಂಬುದಾಗಿದೆ. ನಾನು ಖಾಲಿ ಚೆಕ್‌ನ್ನು ಕೊಡುವುದಿಲ್ಲ.

**ಶ್ರೀ ಬಿ. ಶ್ಯಾಮಸುಂದರ್:**– ಕೆಲವು ಗುಂಟೆಗಳಷ್ಟು ಎಂದರೆ ಕೆಲವು ಎಕರೆಗಳು. ಅದನ್ನೇ ಮಾಡಲಾಗಿದೆ. ನೀವು ಬಯಸಿದರೆ, ನಾನು ಇಂತಹ ಸಾಕಷ್ಟು ಉದಾಹರಣೆಗಳನ್ನು ನೀಡುತ್ತೇನೆ. ಜಮೀನ್ದಾರರು ಈಗಾಗಲೇ ಜಮೀನುಗಳನ್ನು ಹೊಂದಿರುವಾಗ, ಸುತ್ತೋಲೆಗಳನ್ನು ಹೊರಡಿಸುವ ಅಗತ್ಯ ಎಲ್ಲಿದೆ?

**ಶ್ರೀ ಕಡಿದಾಳ್ ಮಂಜಪ್ಪ:**– ಮಾನ್ಯ ಸದಸ್ಯರು ಕೆಲವು ಪ್ರದೇಶಗಳಲ್ಲಿ ಈಗ ಪ್ರಚಲಿತವಿರುವ ಸ್ಥಿತಿಗತಿಗಳನ್ನು ಅರ್ಥ ಮಾಡಿಕೊಂಡಿಲ್ಲ. ಎಲ್ಲೆ ಗುರುತುಗಳನ್ನು ತಿಳಿಯದೆ, ಒಬ್ಬ ವ್ಯಕ್ತಿಯು ಕೆಲವು ಗುಂಟೆಗಳಷ್ಟು ಜಮೀನನ್ನು ಪಡೆದಿದ್ದರೆ, ಅಂಥ ಪ್ರಕರಣಗಳಿಗೆ ಮಾತ್ರ ಈ ಸುತ್ತೋಲೆಯು ಅನ್ವಯವಾಗುತ್ತದೆ. ಪರಿಶಿಷ್ಟ ಜಾತಿಗಳ ಸಂದರ್ಭದಲ್ಲಿ ಅವರು ಆರು ವರ್ಷಗಳವರೆಗೆ ನಿರಂತರವಾಗಿ ಸ್ವಾಧೀನದಲ್ಲಿದ್ದರೆ. ಅವರಿಗೆ ಆ ಜಮೀನುಗಳನ್ನು ಖಾಯಂ ಮಾಡಬೇಕು.

**ಶ್ರೀ ಬಿ. ಶ್ಯಾಮಸುಂದರ್:**– ಹೈದರಾಬಾದ್ ಪ್ರದೇಶದಲ್ಲಿ ಒಂದು ಜಮೀನಿನ ಸ್ವಾಧೀನ ಹೊಂದಿರುವ ಯಾರೇ ಹರಿಜನ ವ್ಯಕ್ತಿಗೆ ಅವರ ಹೆಸರಿನಲ್ಲಿ ಪಟ್ಟಾ ಕೊಡಬೇಕೆಂದು ಆದೇಶ ಮಾಡಿದ್ದಾರೆ.

ನಾನು ಆ ಆದೇಶದ ಪ್ರತಿಯನ್ನು ಮಾನ್ಯ ಸಚಿವರಿಗೆ ಕೊಟ್ಟಿದ್ದೇನೆ. ಹೈದರಾಬಾದ್ ಪ್ರದೇಶಕ್ಕೆ ಮಾಡಿದ ಸುತ್ತೋಲೆಯು ಅತ್ಯಂತ ಪ್ರಗತಿದಾಯಕವಾಗಿದೆ. ಹರಿಜನರು ಗೋವಾಳವನ್ನು ಸ್ವಾಧೀನಪಡಿಸಿಕೊಂಡಿದ್ದರೂ ಕೂಡ, ಅವನ ಹೆಸರಿನಲ್ಲಿ ಪಟ್ಟಾ ಕೊಡಬೇಕು. ಆಂಧ್ರ, ಮಹಾರಾಷ್ಟ್ರ ಮತ್ತು ಕೇರಳಗಳ ಭೂಸುಧಾರಣೆ ವಿಧೇಯಕಗಳ ಅನುಭವವನ್ನು ಹೊಂದಿರುವ ನೀವು ಅದರ ಲೋಪದೋಷಗಳನ್ನು ಮಾತ್ರ ಗಮನಿಸಿದ ನೀವು ಭೂರಹಿತ ಕಾರ್ಮಿಕರಿಗೆ ತೊಂದರೆ ಕೊಡಲು ಪ್ರಯತ್ನಿಸುತ್ತಿದ್ದೀರಿ.

ನಾನು ಖಂಡ ಖಂಡವಾಗಿ ವಿಷಯವನ್ನು ತಿಳಿಸಬಯಸುವುದಿಲ್ಲ. ಯಾಕೆಂದರೆ, ಅದಕ್ಕಾಗಿ ನನಗೆ ಎರಡು ದಿನಗಳು ಬೇಕಾಗಬಹುದು. ಆದಾಗ್ಯೂ, ವಿಧೇಯಕದಲ್ಲಿನ ಪ್ರತಿಯೊಂದು ಪದ, ಭಾಷೆ ಮತ್ತು ವಾಕ್ಯಗಳೂ ಕೂಡ ಸರಿಯಾಗಿಲ್ಲ. ಕ್ಷಮಿಸಿ, ನಾನು ಈಗಾಗಲೆ ಹೆಚ್ಚು ಸಮಯವನ್ನು ತೆಗೆದುಕೊಂಡಿದ್ದೇನೆ. ಇದಕ್ಕೆ ನನ್ನ ಸಂಪೂರ್ಣ ವಿರೋಧವಿದೆ.

ಶ್ರೀ **ಎಂ. ಎಂ. ಪಾಟೀಲ್ (ಹಡಗಲಿ)**:– ಸನ್ಮಾನ್ಯ ಅಧ್ಯಕ್ಷರೇ, ಬಹುತಡವಾದರೂ ಚಿಂತೆಯಿಲ್ಲ ಕಾಂಗ್ರೆಸ್ ಪಕ್ಷದವರು ಈ ದೇಶದ ಜನಾಂಗಕ್ಕೆ ಭೂ ಸುಧಾರಣೆಯನ್ನು ಜಾರಿಗೆ ತರುತ್ತೇವೆಂದು ಹೇಳಿದ್ದರೂ ಅದನ್ನು ಅಕ್ಷರಶಃ ಪಾಲಿಸಿಕೊಂಡು ಬರಲಿಕ್ಕೆ ಇಲ್ಲಿಯವರೆಗೂ ಬಹಳ ಪ್ರಯತ್ನಗಳನ್ನು ಪಟ್ಟು ಈ ವರ್ಷ ಅದನ್ನು ಜಾರಿಗೆ ತರಲು ಈ ಕಾರ್ಯವನ್ನೀಗ ನಿರ್ವಹಿಸುತ್ತಿದ್ದಾರೆ.

ಶ್ರೀ **ಎಂ. ರಾಮಪ್ಪ (ಹರಿಹರ)**:– Better late then never (ಇಲ್ಲದಿರುವುದಕ್ಕಿಂತ ತಡವಾದರೂ ವಾಸಿ) ಎಂತಲೋ?

ಶ್ರೀ **ಎಂ.ಎಂ. ಪಾಟೀಲ್**:– ಆ ವಿಚಾರವೇನೇ ಇರಲಿ ಅಂತೂ ಈಗ ಈ ಒಂದು ರೀತಿಯಲ್ಲಿ ನಮ್ಮ ಕಂದಾಯ ಮಂತ್ರಿಗಳು ಧೈರ್ಯಮಾಡಿ ಈ ವಿಚಾರದಲ್ಲಿ ಮುಂದಕ್ಕೆ ಹೆಜ್ಜೆ ಇಟ್ಟಿದ್ದಾರೆ. ಈಗ ಈ ಭೂಸುಧಾರಣೆ ಮಸೂದೆಯನ್ನು ಅವರು ಈ ಮಾನ್ಯ ಸಭೆಯ ಮುಂದೆ ತಂದುದಕ್ಕಾಗಿ ನಾನು ಪ್ರಪ್ರಥಮವಾಗಿ ಅವರಿಗೆ ನನ್ನ ವಂದನೆಗಳನ್ನರ್ಪಿಸುತ್ತಿದ್ದೇನೆ.

ಶ್ರೀ **ಕೆ.ಪಿ. ರೇವಣಸಿದ್ದಪ್ಪ (ತಿಪಟೂರು)**:– ನಾರಾಯಣ ! ನಾರಾಯಣ !

ಶ್ರೀ **ಸಿ.ಜಿ. ಮುಕ್ಕಣ್ಣಪ್ಪ (ಗುಬ್ಬಿ)**:– ಅವರೇಕೆ ಶಿವ–ಶಿವ! ಎಂತ ಹೇಳುತ್ತಿಲ್ಲ! ನಾರಾಯಣ! ನಾರಾಯಣ! ಎಂತ ಹೇಳುತ್ತಾರೆ?

ಶ್ರೀ **ಎಂ.ಎಂ. ಪಾಟೀಲ್**:– "ದೇವನೊಬ್ಬ ನಾಮ ಹಲವು" ಎಂಬ ಅಂಶವನ್ನು ಶ್ರೀ ಮುಕ್ಕಣ್ಣಪ್ಪ ನವರು ಅರ್ಥಮಾಡಿಕೊಳ್ಳಬೇಕು.

ಶ್ರೀ **ವಿ.ಎಸ್. ಪಾಟೀಲ್**:– ಮಾನ್ಯ ಸದಸ್ಯರು, ಸಚಿವರಿಗೆ ಅಭಿನಂದನೆ ಸಲ್ಲಿಸುತ್ತಿರುವುದು ಏಕೆಂದು ಕೇಳಬಹುದೆ? ಇದು ಇಡೀ ಸಮಿತಿಯಿಂದಾದ ಕಾರ್ಯ. ಅವರು ಇಡೀ ಸಮಿತಿಯನ್ನು ಅಭಿನಂದಿಸಬೇಕೆ ಹೊರತು ಕೇವಲ ಸದಸ್ಯರನ್ನಲ್ಲ.

## ರಾಜ್ಯಪಾಲರ ಭಾಷಣದ ವಂದನಾರ್ಪಣೆಯ ಚರ್ಚೆಯಲ್ಲಿ 1961ರ ಫೆಬ್ರವರಿ 28 ಮತ್ತು ಮಾರ್ಚ್ 2ರಂದು ಜಾತಿಯಾಧಾರಿತ ರಾಜಕೀಯದ ಬಗ್ಗೆ ನಿರ್ಭಿಡೆ

"ನಿರ್ಣಯದ ಕೊನೆಯಲ್ಲಿ ಕೆಳಕಂಡ ಪದಗಳನ್ನು ಸೇರ್ಪಡೆ ಮಾಡಬೇಕೆಂದು ಪ್ರಸ್ತಾವ ಮಂಡಿಸುತ್ತೇನೆ":-

ಆದರೆ,

1. ಭಾಷಣವು, ಭೂ ಸುಧಾರಣೆಗಳಿಗೆ ಸಂಬಂಧಪಟ್ಟಂತೆ ಯಾವುದೇ ಆಶ್ವಾಸನೆ ನೀಡಲು ವಿಫಲವಾಗಿದೆ;
2. ಭಾಷಣವು, ಹೆಚ್ಚುತ್ತಿರುವ ನಿರುದ್ಯೋಗ ಮತ್ತು ಬೆಲೆಗಳ ಕಡೆ ಗಮನ ಸೆಳೆಯಲು ವಿಫಲವಾಗಿದೆ;
3. ಭಾಷಣವು, ಸಂಪುಟ ವಿಸ್ತರಣೆಗೆ ಸಂಬಂಧಿಸಿದಂತೆ ಯಾವುದೇ ಉಲ್ಲೇಖ ಮಾಡಲು ವಿಫಲವಾಗಿದೆ;
4. ಭಾಷಣವು, ಕೈಗಾರಿಕೀಕರಣ ಮತ್ತು ಕೋಲಾರ ಚಿನ್ನದ ಗಣಿ ಉದ್ಯಮದ ಕಾರ್ಯನಿರ್ವಹಣೆಗೆ ಸಂಬಂಧಿಸಿದಂತೆ ಒಂದು ಸೂಕ್ತ ಕಾರ್ಯನೀತಿಯನ್ನು ರೂಪಿಸಲು ವಿಫಲವಾಗಿದೆ:
5. ಭಾಷಣವು, ರಾಜ್ಯದಲ್ಲಿರುವ ಪತ್ರಾಂಕಿತರಲ್ಲದ ಸರ್ಕಾರಿ ನೌಕರರ ಕುಂದುಕೊರತೆಗಳ ಪರಿಹಾರಕ್ಕಾಗಿ ಒಂದು ಸರಿಯಾದ ಕಾರ್ಯನೀತಿಯನ್ನು ರೂಪಿಸಲು ವಿಫಲವಾಗಿದೆ:
6. ಭಾಷಣವು, IIನೇ ಯೋಜನೆ ಅಡಿಯಲ್ಲಿನ ಅಸಮರ್ಪಕ ಪ್ರಗತಿ ಮತ್ತು IIIನೇ ಯೋಜನೆ ಅಡಿಯಲ್ಲಿನ ಅಸಮರ್ಪಕ ಧನಸೌಲಭ್ಯಗಳನ್ನು ಉಲ್ಲೇಖಿಸಲು ವಿಫಲವಾಗಿದೆ.

– ಎಂಬುದಕ್ಕೆ ವಿಷಾಧಿಸುತ್ತೇನೆ.

**ಮಾನ್ಯ ಸಭಾಧ್ಯಕ್ಷರು:–** ತಿದ್ದುಪಡಿಯನ್ನು ಮಂಡಿಸಲಾಗಿದೆ;

"ಎಂದರೆ, ಕೆಳಕಂಡ ಪದಗಳನ್ನು ನಿರ್ಣಯದ ಕೊನೆಯಲ್ಲಿ ಸೇರ್ಪಡೆ ಮಾಡತಕ್ಕದ್ದು:–

ಆದರೆ,

1. ಭಾಷಣವು, ಭೂ ಸುಧಾರಣೆಗಳಿಗೆ ಸಂಬಂಧಪಟ್ಟಂತೆ ಯಾವುದೇ ಭರವಸೆ ನೀಡಲು ವಿಫಲವಾಗಿದೆ;
2. ಭಾಷಣವು, ನಿರುದ್ಯೋಗ ಮತ್ತು ಬೆಲೆಗಳು ಏರುತ್ತಿರುವ ಕಡೆ ಗಮನ ಸೆಳೆಯಲು ಫಲವಾಗಿದೆ;

3. ಭಾಷಣವು, ಸಂಪುಟ ವಿಸ್ತರಣೆಗೆ ಸಂಬಂಧಿಸಿದಂತೆ ಯಾವುದೇ ಉಲ್ಲೇಖ ಮಾಡಲು ವಿಫಲವಾಗಿದೆ;

4. ಭಾಷಣವು, ಕೈಗಾರಿಕೀಕರಣ ಮತ್ತು ಕೋಲಾರ ಚಿನ್ನದ ಗಣಿಗಳ ಉದ್ಯಮದ ಕಾರ್ಯನಿರ್ವಹಣೆಗೆ ಸಂಬಂಧಿಸಿದಂತೆ ಒಂದು ಸೂಕ್ತ ಕಾರ್ಯನೀತಿಯನ್ನು ರೂಪಿಸಲು ವಿಫಲವಾಗಿದೆ;

5. ಭಾಷಣವು, ರಾಜ್ಯದಲ್ಲಿರುವ ಪತ್ರಾಂಕಿತರಲ್ಲದ ಸರ್ಕಾರಿ ನೌಕರರ ಕುಂದುಕೊರತೆಗಳ ಪರಿಹಾರಕ್ಕಾಗಿ ಒಂದು ಸರಿಯಾದ ಕಾರ್ಯನೀತಿಯನ್ನು ರೂಪಿಸಲು ವಿಫಲವಾಗಿದೆ;

6. ಭಾಷಣವು, IIನೇ ಯೋಜನೆ ಅಡಿಯಲ್ಲಿ ಅಸಮರ್ಪಕ ಪ್ರಗತಿ ಮತ್ತು IIIನೇ ಯೋಜನೆ ಅಡಿಯ ಅಸಮರ್ಪಕ ಧನಸೌಲಭ್ಯಗಳನ್ನು ಉಲ್ಲೇಖಿಸಲು ವಿಫಲವಾಗಿದೆ.

– ಎಂಬುದಕ್ಕೆ ವಿಷಾಧಿಸುತ್ತೇನೆ.

ಕೆಳಕಂಡ ಪದಗಳನ್ನು ನಿರ್ಣಯದ ಕೊನೆಯಲ್ಲಿ ಸೇರ್ಪಡೆ ಮಾಡಬೇಕೆಂದು ಪ್ರಸ್ತಾವ ಮಂಡಿಸುತ್ತೇನೆ.

**ಆದರೆ,–**

1. ಎರಡು ವರ್ಷಗಳ ಹಿಂದೆ ಅಧಿಕಾರದಿಂದ ಕೆಳಗಿಳಿಸಲಾದ ವ್ಯಕ್ತಿಗಳನ್ನು ಸಚಿವರನ್ನಾಗಿ ತೆಗೆದುಕೊಂಡು ಅಧಿಕಾರದಲ್ಲಿ ಮುಂದುವರಿಯುವ ಪ್ರಯತ್ನ ಮಾಡುತ್ತಿರುವುದರಿಂದ ಜನರಲ್ಲಿ ಅತೃಪ್ತಿಯನ್ನುಂಟುಮಾಡಿರುವುದು.

2. ಕೋಮು ಪರಿಗಣನೆಗಳ ಮೇಲೆ ಸಚಿವರನ್ನು ತೆಗೆದುಕೊಳ್ಳುವ ಮೂಲಕ ರಾಷ್ಟ್ರ ವಿರೋಧಿ ನೀತಿಯನ್ನು ಶಾಶ್ವತಗೊಳಿಸುವುದು;

3. ಆಡಳಿತ ಮತ್ತು ಸಚಿವಸಂಪುಟ ಎರಡರಲ್ಲೂ ಕೋಮು ಮತ್ತು ಮತೀಯ ಗುಂಪುಗಳನ್ನು ಬಹಿರಂಗವಾಗಿ ಪ್ರೋತ್ಸಾಹಿಸುವ ಮೂಲಕ ಶ್ರೇಣೀ ಕೋಮುವಾದ ಮತ್ತು ಜಾತಿ ವಾದವನ್ನು ಹರಡಿ ಆಚರಿಸಿಕೊಂಡು ಬರುತ್ತಿರುವುದು;

4. ಸರ್ಕಾರಿ ಸೇವೆಗಳಲ್ಲಿ ಕೋಮು ಪರಿಗಣನೆಗಳ ಮೇಲೆ ಜನರನ್ನು ಜವಾಬ್ದಾರಿಯುತ ಮತ್ತು ಪ್ರಮುಖ ಹುದ್ದೆಗಳಿಗೆ ನೇಮಕ ಮಾಡುವ ಮತ್ತು ಬಡ್ತಿ ನೀಡುವ ಮೂಲಕ ರಾಜ್ಯದ ದೈನಂದಿನ ಆಡಳಿತದಲ್ಲಿ ದುರಾಚಾರಕ್ಕೆ ಆಸ್ಪದ ನೀಡಲಾಗಿರುವುದು;

5. ರಾಜ್ಯದ ಅಲ್ಪಸಂಖ್ಯಾತರು ಮತ್ತು ಇತರ ದುರ್ಬಲ ಮತ್ತು ತುಳಿತಕ್ಕೊಳಗಾದ ವರ್ಗಗಳ ಜನತೆಯ ಭದ್ರತೆ, ಭಾಷೆ ಮತ್ತು ಸಂಸ್ಕೃತಿಗಳಿಗಾಗಿನ ಅವರ ಹಕ್ಕುಗಳು ಮತ್ತು ವಿಶೇಷಾಧಿಕಾರಗಳನ್ನು ಕಡೆಗಣಿಸಿರುವುದು.

6. ಸಚಿವಸಂಪುಟದಲ್ಲಿ ಅಲ್ಪಸಂಖ್ಯಾತರ ಪ್ರಾತಿನಿಧ್ಯವನ್ನು ನಿರ್ಲಕ್ಷಿಸಲಾಗಿರುವುದು ಮತ್ತು ನಿರಾಕರಿಸಲಾಗಿರುವುದು:

7. ರಾಜ್ಯದಲ್ಲಿ ಭೂ ಸುಧಾರಣೆಗಳನ್ನು ಜಾರಿಗೊಳಿಸುವಲ್ಲಿ ವಿಫಲವಾಗಿರುವುದು;

8. ಜಾತಿ ಮನೋಭಾವ ಮತ್ತು ಜಾತಿಪೀಡಿತ ಜನರ ಸಮುದಾಯದ ಬಲವನ್ನು ಸಂಪಾದಿಸಿ ಚುನಾವಣೆಗಳಲ್ಲಿ ಅವರ ಮತಗಳನ್ನು ಪಡೆಯಲು ಅಸ್ಪೃಶ್ಯತೆಯನ್ನು ಜೀವಂತವಾಗಿಸಿರುವುದು.

9. ರಾಜ್ಯದ ರಾಜಕೀಯ ರಂಗದಲ್ಲಿ ಗುಂಪು-ಗುಂಪುಗಳನ್ನು ಸೃಷ್ಟಿಸಿ ಅವರ ಆಯ್ಕೆಯ ಗುಂಪಿನೊಂದಿಗೆ ಗುರುತಿಸಿಕೊಂಡು ರಾಷ್ಟ್ರದ ಹಿತಾಸಕ್ತಿಯನ್ನು ಸಹ ಬಲಿಕೊಡುವುದರ ಮೂಲಕ ಇತರರನ್ನು ರಾಜ್ಯದಲ್ಲಿ ಅರೋಗ್ಯಕರ ಆಚರಣೆಗಳ ಬೆಳವಣಿಗೆಯನ್ನು ಕುಂಠಿತಗೊಳಿಸಿರುವುದು;

10. ಪಟ್ಟಣಗಳಲ್ಲಿರುವ ಸುಶಿಕ್ಷಿತ ವರ್ಗಗಳು ಮತ್ತು ಕೃಷಿಕಾರರು, ಭೂಹೀನ ಕೃಷಿಕಾರ್ಮಿಕರ ನಿರುದ್ಯೋಗ ಸಮಸ್ಯೆಯನ್ನು ಹೋಗಲಾಡಿಸದಿರುವುದು;

**– ಇವುಗಳಿಂದಾಗಿ ಸಚಿವರು ತಪ್ಪಿತಸ್ಥರಾಗಿದ್ದಕ್ಕೆ ವಿಷಾದಿಸುತ್ತೇನೆ.**

**ಮಾನ್ಯ ಸಭಾಧ್ಯಕ್ಷರು:–** ತಿದ್ದುಪಡಿಯನ್ನು ಮಂಡಿಸಲಾಗಿದೆ,–

"ಎಂದರೆ ನಿರ್ಣಯದ ಕೊನೆಯಲ್ಲಿ ಕೆಳಕಂಡ ಪದಗಳನ್ನು ಸೇರ್ಪಡೆ ಮಾಡತಕ್ಕದ್ದು:–

**ಆದರೆ,**

1. ಎರಡು ವರ್ಷಗಳ ಹಿಂದೆ ಅಧಿಕಾರದಿಂದ ಕೆಳಗಿಳಿಸಲಾದ ವ್ಯಕ್ತಿಗಳನ್ನು ಸಚಿವರನ್ನಾಗಿ ತೆಗೆದುಕೊಂಡು ಅಧಿಕಾರದಲ್ಲಿ ಮುಂದುವರೆಯುವ ಪ್ರಯತ್ನ ಮಾಡುತ್ತಿರುವುದರಿಂದ ಜನರಲ್ಲಿ ಅತೃಪ್ತಿಯನ್ನುಂಟುಮಾಡಿರುವುದು.

2. ಕೋಮು ಪರಿಗಣನೆಗಳ ಮೇಲೆ ಸಚಿವರನ್ನು ತೆಗೆದುಕೊಳ್ಳುವ ಮೂಲಕ ರಾಷ್ಟ್ರವಿರೋಧಿ ನೀತಿಯನ್ನು ಶಾಶ್ವತಗೊಳಿಸಿರುವುದು;

3. ಆಡಳಿತ ಮತ್ತು ಸಚಿವಸಂಪುಟ ಎರಡರಲ್ಲೂ ಕೋಮು ಮತ್ತು ಮತೀಯ ಗುಂಪುಗಳನ್ನು ಬಹಿರಂಗವಾಗಿ ಪ್ರೋತ್ಸಾಹಿಸುವ ಮೂಲಕ ಶ್ರೇಣೀ ಕೋಮುವಾದ ಮತ್ತು ಜಾತಿವಾದವನ್ನು ಹರಡಿ ಆಚರಿಸಿಕೊಂಡು ಬರುತ್ತಿರುವುದು;

4. ಸರ್ಕಾರಿ ಸೇವೆಗಳಲ್ಲಿ ಕೋಮು ಪರಿಗಣನೆಗಳ ಮೇಲೆ ಜನರನ್ನು ಜವಾಬ್ದಾರಿಯುತ ಮತ್ತು ಪ್ರಮುಖ ಹುದ್ದೆಗಳಿಗೆ ನೇಮಕ ಮಾಡುವ ಮತ್ತು ಬಡ್ತಿ ನೀಡುವ ಮೂಲಕ ರಾಜ್ಯದ ದೈನಂದಿನ ಆಡಳಿತದಲ್ಲಿ ದುರಾಚಾರಕ್ಕೆ ಆಸ್ಪದ ನೀಡಲಾಗಿರುವುದು;

5. ರಾಜ್ಯದ ಅಲ್ಪಸಂಖ್ಯಾತರು ಮತ್ತು ಇತರ ದುರ್ಬಲ ಮತ್ತು ತುಳಿತಕ್ಕೊಳಗಾದ ವರ್ಗಗಳ ಜನತೆಯ ಭದ್ರತೆ, ಭಾಷೆ ಮತ್ತು ಸಂಸ್ಕೃತಿಗಳಿಗಾಗಿನ ಅವರ ಹಕ್ಕುಗಳು ಮತ್ತು ವಿಶೇಷಾಧಿಕಾರಗಳನ್ನು ಕಡೆಗಣಿಸಿರುವುದು.

6. ಸಚಿವ ಸಂಪುಟದಲ್ಲಿ ಅಲ್ಪಸಂಖ್ಯಾತರ ಪ್ರಾತಿನಿಧ್ಯವನ್ನು ನಿರ್ಲಕ್ಷಿಸಲಾಗಿರುವುದು ಮತ್ತು ನಿರಾಕರಿಸಲಾಗಿರುವುದು;

7. ರಾಜ್ಯದಲ್ಲಿ ಭೂ ಸುಧಾರಣೆಗಳನ್ನು ಜಾರಿಗೊಳಿಸುವಲ್ಲಿ ವಿಫಲವಾಗಿರುವುದು;

8. ಜಾತಿ ಮನೋಭಾವದ ಮತ್ತು ಜಾತಿಪೀಡಿತ ಜನರ ಕೋಮಿನ ಒಲವನ್ನು ಸಂಪಾದಿಸಿ ಚುನಾವಣೆಗಳಲ್ಲಿ ಅವರ ಮತಗಳನ್ನು ಪಡೆಯಲು ಅಸ್ಪೃಶ್ಯತೆಯನ್ನು ಜೀವಂತವಾಗಿರಿಸಿರುವುದು;

9. ರಾಜ್ಯದ ರಾಜಕೀಯ ರಂಗದಲ್ಲಿ ಗುಂಪುಗುಂಪುಗಳನ್ನು ಸೃಷ್ಟಿಸಿ ಅವರ ಆಯ್ಕೆಯ ಗುಂಪಿನೊಂದಿಗೆ ಗುರುತಿಸಿಕೊಂಡು ಮತ್ತು ರಾಷ್ಟದ ಹಿತಾಸಕ್ತಿಯನ್ನು ಸಹ ಬಲಿ ಕೊಡುವುದರ ಮೂಲಕ ಇತರರನ್ನು ಸಂಪೂರ್ಣವಾಗಿ ಕಡೆಗಣಿಸಿ ರಾಜ್ಯದಲ್ಲಿ ಆರೋಗ್ಯಕರ ಆಚರಣೆಗಳ ಬೆಳವಣಿಗೆಯನ್ನು ಕುಂಠಿತಗೊಳಿಸಿರುವುದು;

10. ಪಟ್ಟಣಗಳಲ್ಲಿರುವ ಸುಶಿಕ್ಷಿತ ವರ್ಗಗಳು ಮತ್ತು ಕೃಷಿಕಾರರು, ಭೂಹೀನ ಕೃಷಿಕಾರ್ಮಿಕರ ನಿರುದ್ಯೋಗ ಸಮಸ್ಯೆಯನ್ನು ಹೋಗಲಾಡಿಸದಿರುವುದು – ಇವುಗಳಿಗಾಗಿ ಸಚಿವರು ತಪ್ಪಿತಸ್ಥರಾಗಿದ್ದಾರೆಂದು ವಿಷಾದಿಸುತ್ತೇನೆ.

## ರಾಜ್ಯಪಾಲರ ಭಾಷಣದ ಮೇಲೆ ವಂದನಾ ನಿರ್ಣಯ

## ಚರ್ಚೆ – ಮುಂದುವರಿದಿದೆ.

**ಶ್ರೀ ಬಿ. ಶ್ಯಾಮಸುಂದರ್ (ಬಾಲ್ಕಿ):-** ಮಾನ್ಯ, ಸಭಾಧ್ಯಕ್ಷರೆ, ರಾಜ್ಯಪಾಲರ ಭಾಷಣದ ವಂದನಾ ನಿರ್ಣಯಕ್ಕೆ ತಿದ್ದುಪಡಿಯನ್ನು ಸೂಚಿಸಿ ನಾನು ಮಂಡಿಸಿದ ಪ್ರಸ್ತಾವವು ತಾವು ಅಭದ್ರತೆಯಲ್ಲಿರುವುದಾಗಿಯೂ ತಮಗೆ ರಕ್ಷಣೆ ಸಂರಕ್ಷಣೆ ದೊರೆಯುತ್ತಿಲ್ಲವೆಂದು ಮತ್ತು ತಮ್ಮ ಹಿತಾಸಕ್ತಿಗಳು ಗಂಡಾಂತರದಲ್ಲಿದ್ದೇವೆಯೆಂಬ ರಾಜ್ಯದ ಇಡೀ ಜನತೆಯ ಭಾವನೆಯನ್ನು ಬಿಂಬಿಸುತ್ತದೆ. ಅದು ರಾಜ್ಯದಾದ್ಯಂತವಿರುವ ಜನತೆಯ ವಾಸ್ತವ ಅನುಭವವಾಗಿದೆ ಮತ್ತು ಆ ಕಾರಣದಿಂದ ನಾನು ರಾಜ್ಯದಾದ್ಯಂತವಿರುವ ಜನತೆಯೆ ಭಾವನೆಗನುಗುಣವಾಗಿ ನನ್ನ ತಿದ್ದುಪಡಿಯನ್ನು ರೂಪಿಸಿದ್ದೇನೆ. ಇದು ವಾಸ್ತವಾಂಶ ದುರದೃಷ್ಟವಶಾತ್, ಹಲವರು ಈ ಮಾತನ್ನು ಹೇಳಲು ಮುಂದೆ ಬರುವುದಿಲ್ಲ. ಆದರೆ ಅವರೊಂದಿಗೆ ಈ ಬಗ್ಗೆ ಮಾತನಾಡಿದರೆ ಅವರು "ಇದು ನಮ್ಮ ಸ್ಥಳವಲ್ಲ, ಇದು ನಮ್ಮ ಸರ್ಕಾರವಲ್ಲ, ಇದು ಬೇರೆಯವರದು, ಇವರು ನಮ್ಮ ಜನರಲ್ಲ ಎನ್ನುತ್ತಾರೆ". ಇದು, ಈ ರಾಜ್ಯದ ಪ್ರಗತಿಯ ಪಥದಲ್ಲಿ ಅಡ್ಡಬರುವಂಥ ಮಹತ್ವದ ಅಡಚಣೆ ಏಕೆ? ನಿಮ್ಮ ಸ್ವಂತ ಕೋಮು, ನಿಮ್ಮವರು, ನಿಮ್ಮ ಗುರುಗಳು ಮತ್ತು ನಿಮ್ಮದೇ ಪಂಥ ಎಂದು ಸ್ವಂತಕ್ಕೆ ಆಲೋಚಿಸುತ್ತಾ ಕುಳಿತರೆ ಉಳಿದ ಬಹುಸಂಖ್ಯೆ ಜನರ ಪಾಡೇನು? ಜನರಿಗೆ ತಾವು ಸರ್ಕಾರವನ್ನು ಬದಲಿಸಬೇಕೆಂದು ಅನ್ನಿಸದ ಹೊರತು ಮತ್ತು ಆ ಬಗ್ಗೆ ಅವರಿಗೆ ಮನವರಿಕೆಯಾಗದ ಹೊರತು, ಅಲ್ಲಿಯವರೆಗೂ ಒಂದು ಪ್ರಜಾಸತ್ತಾತ್ಮಕ ಸರ್ಕಾರವನ್ನು ನಡೆಸುತ್ತಿದ್ದಾರೆಂದು ನೀವು ಹೇಳಲಾರಿರಿ. ಇದು ಪ್ರಜಾಸತ್ತಾತ್ಮಕ ಸರ್ಕಾರವಲ್ಲ. ಇದು ಒಂದು ಪಕ್ಷದ ಮೂಲಕ, ಒಂದು ಪಕ್ಷಕ್ಕಾಗಿ ಮತ್ತು ಒಂದು ಪಕ್ಷದಿಂದ ಒಂದು ಪಕ್ಷದ ಪ್ರಯೋಜನಕ್ಕಾಗಿ ಇರುವ ಸರ್ಕಾರ. ಇದು ಸಂಪೂರ್ಣವಾಗಿ ಒಂದು ಪಕ್ಷದ ಸರ್ವಾಧಿಕಾರಿ ಧೋರಣೆಯುಳ್ಳ ಸರ್ಕಾರವಾಗಿದೆ ಮತ್ತು ಪಕ್ಷ ಸರ್ಕಾರದ ಒಳಗೂ ಸಹ, ಒಂದು ನಿರ್ದಿಷ್ಟ ವರ್ಗ, ಇನ್ನಿತರ ವರ್ಗಗಳ ಮೇಲೆ ಪ್ರಾಬಲ್ಯ ಮೆರೆಯುತ್ತದೆ. ಇದು ನಿಜವಾಗಲೂ ಅತ್ಯಂತ ದುರದೃಷ್ಟಕರ. ಈ ಕುರಿತು ಸಾವಿರಾರು ಉದಾಹರಣೆಗಳು ಮತ್ತು ಘಟನೆಗಳಿದ್ದು ಅವುಗಳನ್ನೆಲ್ಲಾ ಇಲ್ಲಿ ಉಲ್ಲೇಖಿಸುವ ಅಗತ್ಯವಿಲ್ಲ. ಅವುಗಳಲ್ಲಿ ಕೇವಲ ಒಂದು ಅಥವಾ ಎರಡನ್ನು ಉದ್ಧರಿಸುತ್ತೇನೆ. ಅಧಿಕಾರದಲ್ಲಿರುವ ಜನ ಹಾಗೂ ಸಚಿವರು ಏನು ಒಂದು ಕೋಮಿನ ಹೆಸರಿನಲ್ಲಿ ನಮ್ಮನ್ನು ಆಳುತ್ತಿದ್ದಾರೋ ಆ ಕೋಮನ್ನು ನಾನು ದೂಷಿಸಲಾರೆ. ಅವರು ಅಮಾಯಕರು, ಆದರೆ, ನಾವು ಪ್ರತಿನಿಧಿಸಬೇಕಾದಂತಹ ಜನತೆಯ ಭಾವನೆಗಳನ್ನು ಅಭಿವ್ಯಕ್ತಿಸಲು ನೀವು ನನಗೆ ಅವಕಾಶ ನೀಡಬೇಕು, ಕೇವಲ ಲಿಂಗಾಯತರು ಮಾತ್ರವೇ ಅಧಿಕಾರದ ಚುಕ್ಕಾಣಿ ಹಿಡಿಯುತ್ತಿದ್ದಾರೆಂಬ ಭಾವನೆಯನ್ನು ಎಲ್ಲೆಡೆ ಜನ ವ್ಯಕ್ತಪಡಿಸುತ್ತಿದ್ದಾರೆಂದು ನಾನು ಹೇಳಿದರೆ ನಾನು ಯಾವುದೇ ಸಮುದಾಯದ ಬಗ್ಗೆ ಅಗೌರವ ತೋರುತ್ತಿರುವೆನೆಂಬ ಅರ್ಥವಲ್ಲ. ಪ್ರಸಕ್ತ ಸರ್ಕಾರದ ಪ್ರಸ್ತುತ ವಿಸ್ತರಣಾ ನೀತಿಯು

ಜನತೆಯು ಈ ಭಾವನೆಯನ್ನು ಬಲವಾಗಿ ಸಮರ್ಥಿಸುತ್ತದೆ. ಉದಾಹರಣೆಗೆ ಸಚಿವಸಂಪುಟದ ವಿಸ್ತರಣೆ ಮತ್ತು ಅದರ ಸ್ವರೂಪವನ್ನೇ ತೆಗೆದುಕೊಳ್ಳಿ. ಅಲ್ಲಿ ಅಲ್ಪಸಂಖ್ಯಾತರಿಗೆ ಯಾವುದೇ ಸ್ಥಾನಮಾನವಿಲ್ಲ. ಅವರು, ಲಿಂಗಾಯಿತರು ಮತ್ತು ಲಿಂಗಾಯಿತರಲ್ಲದವರು ಇವೆರಡರ ನಿಟ್ಟಿನಲ್ಲಿ ಮಾತ್ರ ಆಲೋಚಿಸುತ್ತಾರೆ. ಅವರು ಲಿಂಗಾಯಿತರು ಮತ್ತು ಒಕ್ಕಲಿಗರ ನಿಟ್ಟಿನಲ್ಲೇ ಆಲೋಚಿಸುತ್ತಾರೆ ಮತ್ತು ನಮ್ಮದು ರಾಷ್ಟ್ರೀಯ ಸರ್ಕಾರವೆಂದು ಹೇಳುತ್ತಾರೆ.

**ಒಬ್ಬ ಮಾನ್ಯ ಸದಸ್ಯರು**:–ಅವರು ಒಕ್ಕಲಿಗರ ನಿಟ್ಟಿನಲ್ಲಿ ಸಹ ಆಲೋಚಿಸುವುದಿಲ್ಲ.

**ಶ್ರೀ ಬಿ. ಶ್ಯಾಮಸುಂದರ್**:– ಈ ರಾಜ್ಯದ ರಾಜಕೀಯ ರಂಗದಲ್ಲಿ ಅತ್ಯುನ್ನತ ಪಾತ್ರವನ್ನು ನಿರ್ವಹಿಸಿದ, ನಿಮಗೆ ಈ ಕಟ್ಟಡವನ್ನು ನೀಡಿದಂತಹ ಈ ನೆಲದ ಮಹಾನ್ ವ್ಯಕ್ತಿಯನ್ನು ತಮಗೆ ಬೇಕಾಗಿದ್ದ ಸಮಯದಲ್ಲಿ ಈ ಜನರು ಭಿನ್ನಮತೀಯರ ನಾಯಕನನ್ನಾಗಿ ಆಯ್ಕೆ ಮಾಡಿದರು, ಅದು ಅವರ ಉದ್ದೇಶಕ್ಕೆ ತಕ್ಕುದಾಗಿತ್ತು. ಆದರೆ,–

ಸಚಿವ ಸಂಪುಟವನ್ನು ವಿಸ್ತರಿಸುವ ಸಮಯ ಬಂದಾಗ ಅವರನ್ನು ಅದೇರೀತಿ ಅಪಾರ ಹಣ ಹೊಂದಿದ್ದ ಯಾರೋ ಒಬ್ಬ ಶ್ರೀಮಂತನ ಸಹಾಯ ಇವರ ಪಕ್ಷಕ್ಕೆ ಬೇಕಾಗಿತ್ತು. ಅವನನ್ನು ಓಲೈಸಿದರು. ಆದರೆ, ಸೂಕ್ತ ಸಮಯ ಬಂದಾಗ ಇಬ್ಬರೂ ನಾಯಕರು ಒಂದಾದರು, ಈ ಶ್ರೀಮಂತನನ್ನೇ ಕಡೆಗಣಿಸಿದರು. ಅವರ ಸ್ವಂತ ಪಕ್ಷದಲ್ಲೇ ಈ ಎಲ್ಲ ಘಟನೆಗಳು ಘಟಿಸುತ್ತಿರುವ ಬಗ್ಗೆ ಆಲೋಚಿಸಿದರೆ ನಮ್ಮ ಭವಿಷ್ಯದ ಗತಿ ಏನು ಹಾಗೂ ಇತರ ಸಮುದಾಯಗಳ ಭವಿಷ್ಯದ ಗತಿ ಏನು? ಕೋಮುವಾದದ ಈ ಕಥೆಯಿಂದ ನಾವು ಪಾಠ ಕಲಿಯಬೇಕಿದೆ. ಎಲ್ಲ ಕಡೆ ಕೋಮುವಾದವಿದೆ ಮತ್ತು ನೀವು ಕೇವಲ ಕೋಮುವಾದದ ದೃಷ್ಟಿಯಿಂದಲೇ ಆಲೋಚಿಸುವಿರಿ. ಇಲ್ಲಿರುವ ಸಚಿವರು, ಪರಿಶಿಷ್ಟ ಜಾತಿಗಳು, ಮುಸ್ಲಿಮರು, ಕ್ರಿಶ್ಚಿಯನ್ನರು, ಬ್ರಾಹ್ಮಣರು ಮತ್ತು ಇತರ ಸಮುದಾಯಗಳಾದ ನಮಗೆ ಪ್ರಸ್ತುತ ಅಧಿಕಾರದಲ್ಲಿರುವ ಈ ಒಂದು ನಿರ್ದಿಷ್ಟ ಸಮುದಾಯವನ್ನು ಹೊರತುಪಡಿಸಿ, ಇತರರೆಲ್ಲರನ್ನು ಅವರ ಸ್ಥಾನಗಳಿಂದ ತೆಗೆದುಹಾಕುವ ಪಿತೂರಿ ರಾಜ್ಯದಾದ್ಯಂತ ನಡೆಯುತ್ತಿದೆಯೆಂದು ಈಗ ಭಾಸವಾಗತೊಡಗಿದೆ. ಪ್ರಸ್ತುತ ಸಚಿವಸಂಪುಟದಲ್ಲಿರುವ ಕಾಂಗ್ರೆಸ್‌ನ ನಾಯಕರೆಂದೆ ಗುರುತಿಸಿಕೊಂಡವರು ಈ ದೇಶದಲ್ಲಿ ನಡೆದ ಬ್ರಾಹ್ಮಣೇತರ ಚಳುವಳಿಯ ಒಂದು ಕಾಲದ ನೇತಾರರಾಗಿದ್ದವರು ಮತ್ತು ಆ ಚಳುವಳಿಯಲ್ಲಿ ಯಾರ ನೇತೃತ್ವವನ್ನು ವಹಿಸಿದ್ದರೋ ಅವರ ಹಿತಾಸಕ್ತಿಗಳನ್ನು ಕಾಪಾಡುವುದಕ್ಕೆಂದೇ ಈಗ ಅವರು ಅಧಿಕಾರಕ್ಕೆ ಬಂದಿದ್ದಾರೆಂದು ನನಗೆ ಹೇಳಲಾಗಿದೆ. ಇವೆಲ್ಲಾ ವಾಸ್ತವ ಸಂಗತಿಗಳಾಗಿದ್ದು ಇವುಗಳನ್ನು ಉಪೇಕ್ಷಿಸುವಂತಿಲ್ಲ. ಪರಿಸ್ಥಿತಿ ಹೀಗಿರುವಾಗ ಇಲ್ಲಿ ಒಂದು ರಾಷ್ಟ್ರೀಯವಾದಿ ಸರ್ಕಾರವನ್ನು ಸ್ಥಾಪಿಸಲು ನಮಗಾಗುವುದಿಲ್ಲ. ಅಧಿಕಾರದಲ್ಲಿರುವ ಪಕ್ಷವು, ಕೋಮುವಾದಿಗಳ ಒಂದು ನಿರ್ದಿಷ್ಟ ಜಾತಿಯ ಪ್ರತಿಗಾಮಿಗಳಿಗೆ ಅಧಿಕಾರವನ್ನು ಬಿಟ್ಟುಕೊಟ್ಟಿದೆ. ನಾನು ಇಡೀ ಸಮುದಾಯವನ್ನು ದೂಷಿಸುವುದಿಲ್ಲ. ಆದರೆ ಅವರಲ್ಲಿರುವ ಒಂದು ನಿರ್ದಿಷ್ಟ ಜಾತಿಯ ಪ್ರತಿಗಾಮಿಗಳನ್ನು ಮಾತ್ರ ದೂಷಿಸುತ್ತೇನೆ. ಇದು ನಮ್ಮ ರಾಜ್ಯದಲ್ಲಿ ಪ್ರಸ್ತುತವಿರುವ

ರಾಜಕೀಯ ಸನ್ನಿವೇಶ. ಈ ಹಂತದಲ್ಲಿ, ನಮ್ಮದು ಸ್ವತಂತ್ರ ರಾಷ್ಟ್ರ, ನಾವು ಸ್ವತಂತ್ರ ಪ್ರಜೆಗಳು, ನಾವು ಜಗತ್ತಿನ ಇತರ ದೇಶಗಳು ಮತ್ತು ರಾಷ್ಟ್ರದ ಇತರ ಸರ್ಕಾರಗಳೊಂದಿಗೆ ಹೆಗಲಿಗೆ ಹೆಗಲುಕೊಟ್ಟು ಕೆಲಸ ಮಾಡಬೇಕೆಂದು ಅವರು ಹೇಳಬಯಸುತ್ತಾರೆ. ಇತರ ದೇಶಗಳಲ್ಲಿ ಅಲ್ಪಸಂಖ್ಯಾತರನ್ನು ಹೇಗೆ ಪರಿಗಣಿಸಲಾಗುತ್ತಿದೆಯೆಂಬುದನ್ನು, ತೋರಿಸಲು ಎರಡು ಅಥವಾ ಮೂರು ಉದಾಹರಣೆಗಳನ್ನು ಇಲ್ಲಿ ಉಲ್ಲೇಖಿಸಬಹುದು. ಈ ಸರ್ಕಾರ ಒಂದು ರಾಷ್ಟ್ರೀಯವಾದಿ ಸರ್ಕಾರವೆಂದು ನೀವು ಹೇಳುವಿರಾ? ಈ ಯಾವ ಕಾರಣಗಳಿಗೆ ಈ ದೇಶ ವಿಭಜನೆಗೊಂಡಿತೋ ಅದೇ ಕಾರಣಗಳು ಇನ್ನೂ ಇಲ್ಲಿಯೇ ಇವೆ. ಪ್ರಸ್ತುತ ಸಚಿವಸಂಪುಟದಲ್ಲಿ ಮುಸ್ಲಿಮರಿಗೆ ಪ್ರಾತಿನಿಧ್ಯವಿದೆಯೇ? ಈ ದೇಶದಲ್ಲಿ ಮುಸ್ಲಿಮರು ಮತ್ತು ಪರಿಶಿಷ್ಟ ಜಾತಿಗಳ ಜನರನ್ನು ಎರಡನೆ ದರ್ಜೆಯ ನಾಗರಿಕರನ್ನಾಗಿ ಪರಿಗಣಿಸಲಾಗುತ್ತಿರುವುದು ಕಂಡುಬರುತ್ತದೆ. ಇತರ ಜನರ ಬಗ್ಗೆ ಮಾತನಾಡುವುದೇ ಬೇಡ. ನಮ್ಮ ಹಕ್ಕುಗಳಿಗಾಗಿ ಪ್ರಸಕ್ತ ಸರ್ಕಾರದ ಕೃಪೆ ಅಥವಾ ಅನುಗ್ರಹವನ್ನು ಅವಲಂಬಿಸುವುದು ನಮಗೆ ಬೇಕಿಲ್ಲ. ನಮ್ಮ ರಾಜ್ಯದಲ್ಲಿರುವ ಪರಿಶಿಷ್ಟ ಜಾತಿಗಳ ಜನಸಂಖ್ಯೆ 40 ಲಕ್ಷ, ಮತ್ತು ಈ ವಿಧಾನಸಭೆಯಲ್ಲಿ 29 ಜನ ನಮ್ಮ ಸದಸ್ಯರಿದ್ದಾರೆ. ಈ ವಿಧಾನಸಭೆಯಲ್ಲಿರುವ ಲಿಂಗಾಯತ ಸದಸ್ಯರ ಸಂಖ್ಯೆ ಎಷ್ಟು? 45. ಅವರಲ್ಲಿ ಸಚಿವರೆಷ್ಟು? ಆರು ಅಥವಾ ಏಳು ಇದಕ್ಕೆ ಪ್ರತಿಯಾಗಿ ನಾವಿರುವುದು ಕೇವಲ 1.5. ಕ್ರಿಶ್ಚಿಯನ್ನರು ಮತ್ತು ಮುಸ್ಲಿಮರನ್ನು ಪ್ರತಿನಿಧಿಸುವ ಸಚಿವರ ಸಂಖ್ಯೆ ಎಷ್ಟು? ಇಲ್ಲವೇ ಇಲ್ಲ. ಇಷ್ಟೆಲ್ಲ ಇದ್ದರೂ ನಿಮ್ಮದು ರಾಷ್ಟ್ರೀಯವಾದಿ ಸರ್ಕಾರವೆಂದು ನೀವು ಹೇಳಬಯಸುತ್ತೀರಿ. ರಾಷ್ಟ್ರೀಯವಾದವೆಂದರೇನು? ರಾಷ್ಟ್ರೀಯವಾದವನ್ನು ನಾನು ವ್ಯಾಖ್ಯಾನಿಸಬೇಕೆಂದು ನನಗನಿಸುತ್ತಿಲ್ಲ. ಇಲ್ಲಿ ರಾಷ್ಟ್ರೀಯವಾದವೆಂದರೆ ರಾಜ್ಯದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯೂ ಸಂತೃಪ್ತವಾಗಿರಬೇಕೆಂದು ಅರ್ಥೈಸಿದರೆ ಅದಷ್ಟೇ ಸಾಕು. ಇತರ ದೇಶಗಳಲ್ಲಿ ಅಲ್ಪಸಂಖ್ಯಾತರನ್ನು ಪರಿಗಣಿಸುತ್ತಿರುವ ರೀತಿಯ ಬಗ್ಗೆ ಒಂದು ಉದಾಹರಣೆಯನ್ನು ಹೇಳುವುದಾದರೆ – ನೈಜೀರಿಯ ಮತ್ತು ಈಜಿಪ್ಟ್‌ಗಳಲ್ಲಿ ಮುಸಲ್ಮಾನರು ಶೇ.97ರಷ್ಟಿದ್ದರೆ ಕ್ರಿಶ್ಚಿಯನ್ನರು ಕೇವಲ ಶೇ.3ರಷ್ಟು ಇದ್ದಾರೆ. ಆದರೆ ಅಲ್ಲಿ ಮುಸ್ಲಿಮರು ಕ್ರಿಶ್ಚಿಯನ್ನರಿಗೆ ಶೇ. 30ರಷ್ಟು ಪ್ರಾತಿನಿಧ್ಯತೆ ನೀಡಿದ್ದಾರೆ. ಏಕೆ? ಒಂದು ಸಮುದಾಯ ಹಾಗೂ ಮತ್ತೊಂದು ಸಮುದಾಯದ ನಡುವೆ ಸೌಹಾರ್ದಯುತ ಸಂಬಂಧವನ್ನು ಕಾಪಾಡುವ ಸಲುವಾಗಿ ಅಷ್ಟೇ. ಅಖಿಲ ಭಾರತ ಮಟ್ಟದಲ್ಲಿ ಹೋಲಿಸಿ ನೋಡೋಣ. ಅಲ್ಲಿ ಎಷ್ಟು ಜನ ಲಿಂಗಾಯತರಿದ್ದಾರೆ? 40 ಕೋಟಿ ಒಟ್ಟು ಜನಸಂಖ್ಯೆಯಲ್ಲಿ ಕೇವಲ 40 ಲಕ್ಷ.

**ಮಾನ್ಯ ಸಭಾಧ್ಯಕ್ಷರು:–** ಮಾನ್ಯ ಸದಸ್ಯರು ವಿರಾಮದ ತರುವಾಯ ತಮ್ಮ ಭಾಷಣವನ್ನು ಮುಂದುವರಿಸಬಹುದು. ಸದನವನ್ನು ಅರ್ಧ ಗಂಟೆಯವರೆಗೆ ಮುಂದೂಡಲಾಗಿದೆ.

ವಿಶ್ರಾಂತಿಗಾಗಿ ಸದನವನ್ನು ಹತ್ತು ಗಂಟೆ ಒಂದು ನಿಮಿಷಕ್ಕೆ ಮುಂದೂಡಲಾಯಿತು ಮತ್ತು ಹತ್ತು ಗಂಟೆ ಮೂವತ್ತೇಳು ನಿಮಿಷಗಳಿಗೆ ಮತ್ತೆ ಸದನ ಸೇರಿತು.

**(ಮಾನ್ಯ ಸಭಾಧ್ಯಕ್ಷರ ಅಧ್ಯಕ್ಷತೆಯಲ್ಲಿ)**

**ಶ್ರೀ ಬಿ. ಶ್ಯಾಮಸುಂದರ್:–** ನಾನು, ಅವುಗಳ ಸ್ವಂತ ನಾಡುಗಳಲ್ಲಿ ಅಲ್ಪಸಂಖ್ಯಾತರಿಗೆ ಕೃಪಾಂಕ ನೀಡಿರುವಂಥ ರಾಷ್ಟ್ರಗಳ ಬಗ್ಗೆ ಮಾಡನಾಡುತ್ತಿದ್ದೆ. ಉದಾಹರಣೆಗೆ ನೈಜೀರಿಯಾದಲ್ಲಿ, ಶೇ. 3ರಷ್ಟಿರುವ ಕಿಶ್ಚಿಯನ್ ಸಮುದಾಯಕ್ಕೆ ಶೇ.30ರ ಕೃಪಾಂಕವನ್ನು ನೀಡಲಾಗಿರುವ ಬಗ್ಗೆ ನಾನು ಮಾಡನಾಡುತ್ತಿದ್ದೆ; ಅದೇ ರೀತಿ ಲೆಬನಾನ್ ಮತ್ತು ಸೈಪ್ರಸ್ ದೇಶಗಳಲ್ಲಿ ಅವರ ಸಂವಿಧಾನದಲ್ಲೇ ಇದನ್ನು ಸೇರ್ಪಡೆ ಮಾಡಲಾಗಿದೆ. ಇದು ದೇಶದ ಸಂವಿಧಾನದ ಒಂದು ಭಾಗವಾಗಿದೆ. ಈ ರಾಜ್ಯದಲ್ಲಿ, ನಮ್ಮ ಜನಸಂಖ್ಯೆ ಸುಮಾರು ಶೇಕಡಾ 20ರಷ್ಟಿರುವ ನಮ್ಮನ್ನು ಇನ್ನೂ ಇಲ್ಲಿ ಎರಡನೆ ದರ್ಜೆಯ ನಾಗರಿಕರನ್ನಾಗಿ ಪರಿಗಣಿಸಲಾಗುತ್ತಿದೆ. ಕೇವಲ ಪರಿಶಿಷ್ಟ ಜಾತಿಯವರನ್ನು ಮಾತ್ರ ಈ ರೀತಿ ಪರಿಗಣಿಸಲಾಗುತ್ತಿಲ್ಲ. ಒಂದೆರಡು ಸಮುದಾಯಗಳನ್ನು ಹೊರತುಪಡಿಸಿದರೆ, ಬಹುತೇಕ ಎಲ್ಲ ಅಲ್ಪಸಂಖ್ಯಾತ ಸಮುದಾಯಗಳನ್ನು ಇದೇ ರೀತಿಯಲ್ಲಿ ಪರಿಗಣಿಸಲಾಗುತ್ತಿದೆ. ಜನ ತಪ್ಪು ತಿಳಿದುಕೊಳ್ಳಬಹುದು, ಅವರು ಇದು ಒಂದು ನಿರ್ದಿಷ್ಟ ಸಮುದಾಯದ ವಿರುದ್ಧವಾದುದೆಂದು ತಿಳಿದುಕೊಳ್ಳಬಹುದು. ನನ್ನ ದೃಷ್ಟಿಕೋನಗಳು, ಒಂದು ನಿರ್ದಿಷ್ಟ ಸಮುದಾಯದ ವಿರುದ್ಧವಲ್ಲ; ನಾನು ಇದನ್ನು ಹೆಚ್ಚು ಸ್ಪಷ್ಟಗೊಳಿಸಬಯಸುತ್ತೇನೆ. ಇದು, ಒಂದು ನಿರ್ದಿಷ್ಟ ಸಮುದಾಯದ ಹೆಸರಿನಲ್ಲಿ ಒಂದು ತಂಡದ ಜನರು ಅಧಿಕಾರಕ್ಕೆ ಬಂದಿರುವುದು ಹಾಗೂ ಆ ಸಮುದಾಯದ ಹೆಸರಿನಲ್ಲಿ ಅವರು ಅಧಿಕಾರದಲ್ಲಿರಬಯಸಿರುವ ಜನರ ವಿರುದ್ಧವಾಗಿದೆ. ಅವರು ನಮಗೆ ಮಾತ್ರವೇ ಅನ್ಯಾಯ ಮಾಡುತ್ತಿಲ್ಲ, ಅವರು ದೇಶಕ್ಕೂ ಹಾಗೂ ಅವರ ಸ್ವಂತ ಸಮುದಾಯಕ್ಕೂ ಸಹ ಅನ್ಯಾಯ ಮಾಡುತ್ತಿದ್ದಾರೆ. ಈ ಭಾವನೆಗಳು ಹೆಚ್ಚು ಹೆಚ್ಚು ಬಲಗೊಳ್ಳುತ್ತಿದ್ದರೆ, ನಾವು ಅಂತರ್ಯುದ್ಧಕ್ಕೆ ದಾರಿ ಮಾಡಿಕೊಡ ಬಹುದಾದಂತಹ ಒಂದು ದಿನವೂ ಬರಬಹುದು. ಕೆಲವರಿಗೆ, ಕಾಂಗ್ರೆಸ್ಸಿನ ಹೈಕಮಾಂಡ್ ಎಂದು ಕರೆಯಲಾಗುವ ವ್ಯಕ್ತಿಯು ಮಾಡಿದ ಆದೇಶಗಳನ್ನೂ ಸಹ ಅವರ ಸ್ವಂತ ಆಸಕ್ತಿಗೆ ಸಂಬಂಧಿಸುವಷ್ಟರಮಟ್ಟಿಗೆ ಧಿಕ್ಕರಿಸಲಾಗಿದೆ ಎಂಬುದು ನನಗೆ ಗೊತ್ತು. ಒಂದು ವಿಷಯದ ಬಗ್ಗೆ ನನಗೆ ತಿಳಿದಿರುವುದೇನೆಂದರೆ ಕೆಲವೇ ದಿವಸಗಳಿಗೆ ಹಿಂದೆ, ರಾಜ್ಯಸಭೆಯಲ್ಲಿ ಒಂದು ಖಾಲಿ ಹುದ್ದೆ ಸೃಷ್ಟಿಯಾದಾಗ, ಆ ಸಮಯದಲ್ಲಿ ಅನೇಕ ಹೆಸರುಗಳನ್ನು ಪ್ರಸ್ತಾಪಿಸಲಾಯಿತು. ಭಾರತೀಯ ನ್ಯಾಷನಲ್ ಕಾಂಗ್ರೆಸ್‌ನ ಅಧ್ಯಕ್ಷರು, ರಾಜ್ಯ ಸರ್ಕಾರಕ್ಕೆ ಒಬ್ಬ ಹರಿಜನನನ್ನು ನಾಮನಿರ್ದೇಶನ ಮಾಡಬೇಕೆಂದು ಸೂಚಿಸುವ ದಯೆ ತೋರಿದ್ದರು. ರಾಜ್ಯ ಸಭೆಯಲ್ಲಿ ರಾಜ್ಯದಿಂದ ಹರಿಜನ ಪ್ರತಿನಿಧಿ ಇರಲಿಲ್ಲ. ಆದರೆ, ಅವರು ಮಾಡಿರುವುದೇನು? ಅವರು ಅದನ್ನು ನಿಧಾನವಾಗಿ ತಳ್ಳಿಹಾಕಿ ಇನ್ಯಾರನ್ನೋ ಗೊತ್ತುಪಡಿಸಿದರು. ಅವರು ಯಾರೆಂದು ನನಗೆ ತಿಳಿದಿಲ್ಲ. ಅವರು ಒಂದು ಸಮುದಾಯದ ಒಬ್ಬ ವ್ಯಕ್ತಿಯನ್ನು ಹಿಡಿದರು, ಆ ಸಮುದಾಯಕ್ಕೆ ಪ್ರಾತಿನಿಧ್ಯವನ್ನು ನೀಡಬೇಕೆಂದಲ್ಲ, ಆದರೆ ಆ ವ್ಯಕ್ತಿಯನ್ನು ಅವರ ಕೈಗೊಂಬೆಯನ್ನಾಗಿ ಮಾಡಿಕೊಂಡು ಆ ವ್ಯಕ್ತಿಯನ್ನು ಅವರ ಸ್ವಂತ ಆಸೆಗಳನ್ನು ಪೂರೈಸಿಕೊಳ್ಳಲು ಬಳಸಿಕೊಂಡರು. ರಾಜಕೀಯ ಪ್ರಾತಿನಿಧ್ಯಕ್ಕೆ ಸಂಬಂಧಪಟ್ಟ ಪ್ರಕರಣ ಹೀಗಿದೆ:

ನಾನು ಈಗ ಈ ದೇಶದಲ್ಲಿನ ಆರ್ಥಿಕ ಹಾಗೂ ಸಾಮಾಜಿಕ ವಲಯಕ್ಕೆ ಬರುತ್ತೇನೆ. ಮಾನ್ಯರೆ, ನಾನು ಅನೇಕಬಾರಿ ಲೋಕಸೇವಾ ಆಯೋಗದಲ್ಲಿ ನಮಗೆ ಪ್ರಾತಿನಿಧ್ಯ ಬೇಕೆಂದು ನಾನು ಕೇಳುತ್ತಲೇ ಇದ್ದೇನೆ ಹಾಗೂ ತಗಾದೆ ಮಾಡುತ್ತಲೇ ಇದ್ದೇನೆ. ಅವರು ಎಲ್ಲ ರೀತಿಯ ಸಿಹಿಮಾತುಗಳೊಂದಿಗೆ ನಮಗೆ ಮಾತುಕೊಟ್ಟರು. ಆದರೆ ಇಲ್ಲಿಯವರೆಗೆ ಏನೂ ಆಗಿಲ್ಲ. ನಾವು, ಉದ್ಯೋಗಕ್ಕಾಗಿ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳ ಸಂಖ್ಯೆಯನ್ನು ಮತ್ತು ಸಣ್ಣ ಸಮುದಾಯಗಳ ಪೈಕಿಯಿಂದ ನಿಯೋಜಿತರಾದವರ ಸಂಖ್ಯೆಯನ್ನು ತೆಗೆದುಕೊಂಡಾಗ ಎಲ್ಲರಿಗೂ ಪ್ರಾತಿನಿಧ್ಯ ನೀಡಲಾಗಿದೆ ಎಂಬುದನ್ನು ತೋರಿಸಲು ಮಾತ್ರವೇ ಕೆಲವು ಮುಸ್ಲಿಮರು, ಕೆಲವು ಕ್ರಿಶ್ಚಿಯನ್ನರು ಮತ್ತು ಕೆಲವು ಬ್ರಾಹ್ಮಣರನ್ನು ತೆಗೆದುಕೊಂಡಿರುವುದನ್ನು ನಾವು ನೋಡಬಹುದು.

ಅವರು, ಕೆಲವು ಪರಿಶಿಷ್ಟ ಜಾತಿಯ ಜನಗಳನ್ನು ತೆಗೆದುಕೊಳ್ಳುತ್ತಾರೆ, ಹಾಗೂ ಅವರಿಗೆ ಸಾಕಷ್ಟು ಪ್ರಾತಿನಿಧ್ಯವನ್ನು ನೀಡಲಾಗಿದೆ ಎಂದು ಹೇಳುತ್ತಾರೆ. ಅಲ್ಲಿಯೂ ಸಹ ಅವರಿಗೆ ಒಂದು ವರ್ಗವಿರುತ್ತದೆ. ಪುನಃ ಅವರು ಕೆಲವು ಬಾರಿ, ಒಬ್ಬ ಸೂಕ್ತ ಅಭ್ಯರ್ಥಿ ಸಿಗಲಿಲ್ಲವೆಂದೂ ಅದರಿಂದಾಗಿ ಅವರು ಬೇರೆ ಯಾರನ್ನೋ ನೇಮಕ ಮಾಡಿಕೊಳ್ಳಬೇಕಾಯಿತು ಎಂದು ಹೇಳುತ್ತಾರೆ. ಆದ್ದರಿಂದ ಮಾನ್ಯರೆ, ಉತ್ತಮ ಮೇಧಾವಿಗಳಿಗೆ ದೇಶದ ಸೇವೆಯನ್ನು ಮಾಡುವ ಹಕ್ಕನ್ನು ನಿರಾಕರಿಸಲಾಗಿದೆ.ಇದು ಹೀಗೆಯೇ ಮುಂದುವರಿದರೆ, ದೇಶವು ಖಂಡಿತವಾಗಿ ಹಾಳಾಗುತ್ತದೆ. ಉತ್ತಮ ಮುಸ್ಲಿಮರು, ಉತ್ತಮ ಕ್ರಿಶ್ಚಿಯನ್ನರು, ಮತ್ತು ಉತ್ತಮ ಬ್ರಾಹ್ಮಣರಿಗೆ ತಾಂತ್ರಿಕ ಶಾಲೆಗಳಿಗೆ ಹಾಗೂ ಕಾಲೇಜುಗಳಿಗೆ ಮತ್ತು ಇತರ ಸಂಸ್ಥೆಗಳಿಗೆ ಪ್ರವೇಶಿಸುವ ಹಕ್ಕನ್ನು ನಿರಾಕರಿಸಲಾಗಿದೆ. ಇದು ನಮ್ಮ ದೇಶದಲ್ಲಿರುವ ಪ್ರತಿಭಾವಂತರ ದಿವಾಳಿತನವಾಗುತ್ತದೆ. ಒಂದಲ್ಲ ಒಂದು ದಿನ ನೀವು ಈ ದೇಶವನ್ನು ನಾಶಪಡಿಸುತ್ತೀರಿ.

ಶ್ರೀ ಸಿ. **ಆಬ್ರುಮುಗಂ**:– ಅವರು ನಾಶಪಡಿಸುತ್ತಿದ್ದಾರೆ.

ಶ್ರೀ **ಬಿ. ಶ್ಯಾಮಸುಂದರ್**:– ಅವರು ಇದನ್ನು ಶತಮಾನಗಳಿಂದಲೂ ಮಾಡುತ್ತಿದ್ದಾರೆ. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಎಂದು ಕರೆಯಲಾಗುವ ಪಕ್ಷವು ಮೈಸೂರಿನಲ್ಲಿ ಲಿಂಗಾಯಿತರು, ಆಂಧ್ರವಲ್ಲಿ ಆಂಧ್ರರು, ಮದ್ರಾಸ್‌ನಲ್ಲಿ ನಾದರರು ಮತ್ತು ಮಹಾರಾಷ್ಟ್ರದಲ್ಲಿ ಮಹಾರಾಷ್ಟ್ರೀಯನ್ನರ ಪರವಾಗಿದೆ.

ಶ್ರೀ **ಎಸ್. ರಾಚಯ್ಯ**:– (ಕೃಷಿ, ಅಬ್ಕಾರಿ ಮತ್ತು ಸಮಾಜ ಕಲ್ಯಾಣ ಸಚಿವರು) ಆಂಧ್ರಪ್ರದೇಶದ ಮುಖ್ಯಮಂತ್ರಿ ಒಬ್ಬ ಹರಿಜನ.

ಶ್ರೀ **ಬಿ. ಶ್ಯಾಮಸುಂದರ್**:– ಆದರೇನಾಯಿತು? ಇಲ್ಲಿಯೂ ಅಂತಹವರು ಇದ್ದಾರೆ. ಹಾಗೆಂದ ಮಾತ್ರಕ್ಕೆ ಅವರು ಯಾವುದೇ ಉದ್ದೇಶವನ್ನು ಈಡೇರಿಸುವುದಿಲ್ಲ ಎಂದಲ್ಲ. ಸಚಿವಸಂಪುಟದಲ್ಲಿ ಒಬ್ಬರ ಅಥವಾ ಇಬ್ಬರ ಪ್ರಾತಿನಿಧ್ಯ ಇಲ್ಲ ಎಂಬುದು ವಿಷಯವಲ್ಲ. ಅದು ಜೀವನದ ಇತರ ಕ್ಷೇತ್ರಗಳಲ್ಲೂ ಸಹ ಇರಬೇಕು ಈ ದಿನ ನಮ್ಮ ದೇಶದಲ್ಲಿ ಇರುವ ಸಾಮಾಜಿಕ ಸ್ಥಾನಮಾನಗಳೇನು? ಗ್ರಾಮದಲ್ಲಿ ನಮಗೆ ಒಂದು ಬಿಂದಿಗೆ ನೀರು ಸಿಗುತ್ತದೆಯೇ? ಒಂದು

ಬಿಂದಿಗೆ ನೀರಿಗೆ ನಾವು ಮೈಲಿಗಟ್ಟಲೆ ನಡೆಯಬೇಕು. ನಾನು ಇತ್ತೀಚೆಗೆ ನನ್ನ ಕ್ಷೇತ್ರಕ್ಕೆ ಹೋಗಿ ಹರಿಜನರ ಬಡಾವಣೆಗೆ ಭೇಟಿ ಇತ್ತಾಗ, ಅಲ್ಲಿನ ಶಾಲೆಯಲ್ಲಿ ಒಬ್ಬ ವಿದ್ಯಾರ್ಥಿಯೂ ಇರಲಿಲ್ಲ. ನಾನು ವಿಚಾರಣೆ ಮಾಡಿದಾಗ, ಅಲ್ಲಿ ಉಪಾಧ್ಯಾಯರು ಇರಲಿಲ್ಲ. ಹಾಗಾಗಿ ಯಾವ ವಿದ್ಯಾರ್ಥಿಗಳೂ ಇರಲಿಲ್ಲ ಹಾಗೂ ಅಲ್ಲಿ ಒಂದು ವರ್ಷದಿಂದಲೂ ಉಪಾಧ್ಯಾಯರಿಲ್ಲವೆಂದು ತಿಳಿಯಿತು; ಆದರೂ ಈ ಮಕ್ಕಳ ಸೌಲಭ್ಯಕ್ಕಾಗಿ ಅನೇಕ ಶಾಲೆಗಳನ್ನು ತೆರೆದಿರುವುದಾಗಿ ಸರ್ಕಾರವು ಹೇಳುತ್ತದೆ. ಒಟ್ಟಾರೆ, ಎಲ್ಲಾ ಕಡೆಯೂ ಅವ್ಯವಸ್ಥೆ ಇದೆ. ಅವರು ಹೇಳುವುದು ಒಂದು, ಮಾಡುವುದು ಮತ್ತೊಂದು ಆಗಿದೆ. ಯಾವ ಸಂದರ್ಭಗಳು ನಿಮಗೆ ಸಚಿವರಾಗಲು ಹಾಗೂ ಇಲ್ಲಿ ಕುಳಿತುಕೊಳ್ಳಲು ಅವಕಾಶ ನೀಡಿತೋ ನನಗೆ ತಿಳಿದಿಲ್ಲ. ಮಾನ್ಯರೆ, ಮೈಸೂರಿನಲ್ಲಿ ಹಿಂದಿನ ಕಾಲದಲ್ಲಿ, ಬ್ರಾಹ್ಮಣರು ಮಂತ್ರಿಗಳಾಗಿದ್ದಾರೆ. ಮುಸ್ಲಿಮರು ಮಂತ್ರಿಗಳಾಗಿದ್ದಾರೆ ಹಾಗೂ ಮೊದಲಿಯಾರರು ಮಂತ್ರಿಗಳಾಗಿದ್ದಾರೆ. ಆದರೆ, ಅದು ಈಗ ಸಂಪೂರ್ಣ ಬದಲಾವಣೆ ಹೊಂದಿದೆ. ಇಲ್ಲಿ ಯಾರೂ ಏನನ್ನೂ ನಿರೀಕ್ಷಿಸುವ ಹಾಗಿಲ್ಲ. ನಾನು ಈ ರಾಜ್ಯದ ಮುಖ್ಯಮಂತ್ರಿಯಾಗುತ್ತೇನೆಂದು ನಿರೀಕ್ಷಿಸಬಹುದೇ? ನಾನು ಅವರ ಕೈಗೊಂಬೆಯಾದ ಹೊರತು, ಇದು ಸಾಧ್ಯವಿಲ್ಲದ್ದು. ಯಾರು ಕಟ್ಟುನಿಟ್ಟಾದ ಹಾಗೂ ಸ್ವಂತ ಅಭಿಪ್ರಾಯಗಳನ್ನು ಹೊಂದಿರುತ್ತಾರೋ ಅವರಿಗೆ ಇಲ್ಲಿ ಜಾಗವಿಲ್ಲ.

ಮಾನ್ಯರೆ, ಯಾವಾಗ ಮಂತ್ರಿಮಂಡಲವನ್ನು ಕಿತ್ತುಹಾಕಲಾಯಿತೋ, ಆ ಜನರೇ ಈಗಿನ ಮಂತ್ರಿಮಂಡಲದ ವಿರುದ್ಧ 27 ಆರೋಪಗಳನ್ನು ಮಾಡಿದರು. ಹಾಗಿರುವಾಗ ನೀವು ನಿಮ್ಮ ಕೈಗಳು ಶುದ್ಧವಾದುದು ಹಾಗೂ ಆ ಎಲ್ಲ ಆರೋಪಗಳು ಸುಳ್ಳು ಎಂಬುದನ್ನು ರುಜುವಾತುಪಡಿಸಿದ ಹೊರತು ರಾಜಿಯಾಗುವ ಅವಶ್ಯಕತೆ ಎಲ್ಲಿಂದ ಬರುತ್ತದೆ? ಈಗ ನೀವು ಅದರಲ್ಲಿ ನಾಲ್ಕನ್ನು ತೆಗೆದುಕೊಂಡಿರುವಿರಿ, ಇದು ನಿಮ್ಮನ್ನು ಕ್ಷಮಿಸುವಂತೆ ನೀವು ಅವರನ್ನು ಕೇಳಿರುವುದಾಗಿ ತೋರಿಸುತ್ತದೆ. ಸ್ವಾಮಿ, ಉರ್ದುವಿನಲ್ಲಿ ಒಂದು ಹೇಳಿಕೆ ಇದೆ:

ತಪ್ಪು ಮಾಡಿದವನು ಹೇಳುತ್ತಾನೆ, ಓ! ದೇವರೇ, ನನ್ನ ತಪ್ಪುಗಳು ನಿನ್ನ ಕ್ಷಮಿಸುವ ಎಲ್ಲ ಅಧಿಕಾರಗಳಿಗಿಂತಲೂ ಹೆಚ್ಚಿನದಾಗಿದೆ.

ಅದೇರೀತಿಯಲ್ಲಿ, ನಮ್ಮ ಸಚಿವರು ಮೈಸೂರಿನ ದೇವರ ಮುಂದೆ ಮೊಣಕಾಲೂರಿ ಹೇಳಿದರು "ನಮ್ಮನ್ನು ಕ್ಷಮಿಸಿ, ನಾವು ಅನೇಕಾನೇಕ ತಪ್ಪುಗಳನ್ನು ಮಾಡಿದ್ದೇವೆ."

**ಮಾನ್ಯ ಸದಸ್ಯರೊಬ್ಬರು:–** ಅವರು ಯಾರು?

ಶ್ರೀ ಬಿ. ಶ್ಯಾಮಸುಂದರ್:– ಅವರು ಚಿಕಿತ್ಸೆ ಪಡೆಯುತ್ತಿದ್ದಾರೆ. (ನಗು) ಅವನು ಕ್ಷಮಿಸಿದ್ದಾನೆ ಹಾಗೂ ಈ ಜನರು ಅವರ ವಿರುದ್ಧ ಮಾಡಲಾದ ಎಲ್ಲಾ ಆಪಾದನೆಗಳನ್ನು ಅಂಗೀಕರಿಸಿದ್ದಾರೆ. ಅವರು ಅವರ ವಿರುದ್ಧ ಆರೋಪಿಸಲಾದ ಎಲ್ಲ ಆರೋಪಗಳನ್ನು ಒಪ್ಪಿಕೊಂಡಿದ್ದಾರೆ ಎಂಬುದು ರಾಜಿಯಿಂದ ತಿಳಿಯುತ್ತದೆ, ಮತ್ತು ಅವರು ಅವನ ಮುಂದೆ ತಲೆ ತಗ್ಗಿಸಿದ್ದಾರೆ. ಈಗ ಇಡೀ ದೇಶ ಈ ವ್ಯಕ್ತಿಗಳು ರಾಜೀನಾಮೆ ನೀಡುವಂತೆ ಕೇಳಬೇಕಾಗಿದೆ. ಅವರಿಗೆ ಇಲ್ಲಿ ಜಾಗವಿಲ್ಲ, ಸ್ವಾಮಿ, ಕೆಲವೇ

ದಿನಗಳ ಹಿಂದೆ ಅವರು, ತಮ್ಮ ಮೇಲೆ ಯಾವ ಆರೋಪಗಳೂ ಇಲ್ಲ ಹಾಗೂ ಅವರು ಒಂದು ಇಂಚೂ ಬಗ್ಗುವುದಿಲ್ಲವೆಂದು ಹೇಳುತ್ತಿದ್ದರು. ಅವರು ಈಗ ತಲೆ ತಗ್ಗಿಸಿರುವುದಷ್ಟೇ ಅಲ್ಲ, ಯಾರನ್ನು ವಾಸ್ತವವಾಗಿ ಮಂತ್ರಾಲಯದಿಂದ ವಜಾ ಮಾಡಲಾಗಿದೆಯೋ ಆ ವ್ಯಕ್ತಿಯ ಎದುರು ತಲೆ ಬಾಗಿಸಿದ್ದಾರೆ. ಈಗ ಆ ಮಂತ್ರಾಲಯದ ಉಪಸಚಿವರು, ಪೂರ್ಣ ಪ್ರಮಾಣದ ಸಚಿವರಾಗಿದ್ದಾರೆ. ಯಾವ ಪ್ರಾಮಾಣಿಕ ಮನುಷ್ಯನೂ, ಚಾರಿತ್ರ್ಯವುಳ್ಳ ಯಾವ ವ್ಯಕ್ತಿಯೂ ಈ ನಿಟ್ಟಿನಲ್ಲಿ ಯಾವತ್ತೂ ಯೋಚಿಸುವುದಿಲ್ಲ.

ಸ್ವಾಮಿ, ಅವರು ಹೇಳುವುದು ಒಂದು, ಮಾಡುವುದು ಇನ್ನೊಂದು. ಮುಸ್ಲಿಮರಿಗೆ, ಶೈಕ್ಷಣಿಕ ಸೌಲಭ್ಯವಿಲ್ಲ. ಸಂವಿಧಾನದ ಅಡಿಯಲ್ಲಿ ನಾವು ಉರ್ದುವನ್ನು ಒಂದು ಭಾಷೆಯೆಂದು ಒಪ್ಪಿಕೊಂಡಿದ್ದೇವೆ. ಮೂರು ವರ್ಷಗಳ ಹಿಂದೆ, ನಮ್ಮ ಭಾಷಣಗಳನ್ನು ಉರ್ದುಭಾಷೆಯಲ್ಲಿ ದಾಖಲಿಸಲು ಒಬ್ಬ ಶೀಘ್ರಲಿಪಿಕಾರನನ್ನು ಹೊಂದುವ ಅವಶ್ಯಕತೆಯ ಬಗ್ಗೆ ನಾನು ಮುಖ್ಯಮಂತ್ರಿಗಳಿಗೆ ಪತ್ರ ಬರೆದೆ ಹಾಗೂ ಈ ಸದನದ ಗಮನ ಸೆಳೆದೆ. ಅವರು ಅದನ್ನು ನಿರ್ಲಕ್ಷಿಸಿದರು. ಇದೇ ನಾವು ಸರ್ಕಾರದಿಂದ ಪಡೆಯುವ ಆದರಾತಿಥ್ಯ.

ನಮ್ಮ ರಾಜ್ಯದಲ್ಲಿ ಮರಾಠಿ ಭಾಷೆ ಮಾತನಾಡುವ ಜನರ ಬಗ್ಗೆ ಏನು ಹೇಳುವುದು? ಅವರು 12 ಲಕ್ಷ ಜನರಿದ್ದಾರೆ, ಹಾಗೂ ಅವರು ಭಾಷಾ ಅಲ್ಪಸಂಖ್ಯಾತರು. ಈ ಭಾಷಾ ಅಲ್ಪಸಂಖ್ಯಾತರನ್ನು ಸಂವಿಧಾನವು ರಾಜ್ಯದ ಒಂದು ಭಾಗವೆಂದು ಒಪ್ಪಿಕೊಂಡಿದೆ. ಅವರಿಗೆ ನೀಡಿದ ಪರಿಹಾರವೇನು? ಅವರು ಯಾವ ರೀತಿಯ ಪ್ರಾತಿನಿಧ್ಯ ಹೊಂದಿದ್ದಾರೆ? ಅವರಿಗೆ ನೀಡಲಾದ ರಕ್ಷಣೆಗಳು ಕೇವಲ ಕಾಗದಗಳಲ್ಲಿ ಮಾತ್ರ ಇದೆ, ಬೇರೆಡೆಯೆಲ್ಲಿದೆ? ಸಾರ್ವಜನಿಕ ಚಟುವಟಿಕೆಗಳ ಹಲವಾರು ಕ್ಷೇತ್ರಗಳಲ್ಲಿ ಅವರಿಗೆ ನೀಡಿದ ಪ್ರಾತಿನಿಧ್ಯವನ್ನು ಪಟ್ಟಿ ಮಾಡಿದರೆ, ಅವರಿಗೆ ಪ್ರಾತಿನಿಧ್ಯವೇ ಇಲ್ಲವೆಂಬುದನ್ನು ನಾವು ಕಂಡುಕೊಳ್ಳಬಹುದು.

ಸ್ವಾಮಿ, ಹಿಂದಿನ ದಿನಗಳ ಭಾರತೀಯ ನ್ಯಾಷನಲ್ ಕಾಂಗ್ರೆಸ್, ಭೂಸುಧಾರಣೆಗಳನ್ನು ಪ್ರತಿಪಾದಿಸುವ ಬಗ್ಗೆ ವರ್ಷದಿಂದ ವರ್ಷಕ್ಕೆ ನಿರ್ಣಯಗಳನ್ನು ಹೊರಡಿಸಿತು. ಸ್ವಾತಂತ್ರ್ಯದ ಅನೇಕ ವರ್ಷಗಳ ನಂತರವೂ, ಈ ಸುಧಾರಣೆಗಳು ಏನಾಗಿವೇ? ಕಾಂಗ್ರೆಸ್ ಪಕ್ಷಕ್ಕೆ ಈ ಸುಧಾರಣೆಗಳು ಬೇಕಿಲ್ಲ. ಏಕೆಂದರೆ ಅದು ಅವರ ರಾಜಕೀಯ ಭವಿಷ್ಯಗಳಿಗೆ ಬಾಧಕವನ್ನುಂಟುಮಾಡುತ್ತದೆ ಎನ್ನುವುದು ಸ್ಪಷ್ಟವಾಗುತ್ತದೆ. ಆರ್ಥಿಕ ಚಾಲನಶಕ್ತಿಯನ್ನು ನೀಡುವುದು ಪಕ್ಷಕ್ಕೆ ಬೇಕಾಗಿಲ್ಲ. ಏಕೆಂದರೆ, ಅದಕ್ಕೆ, ಜಮೀನುದಾರರ ಬೆಂಬಲವನ್ನು ಕಳೆದುಕೊಳ್ಳಬಹುದೆಂಬ ಭಯ. ಕಾಂಗ್ರೆಸ್ ಪಕ್ಷವು, ಮತಗಳನ್ನು ಪಡೆದು, ಅಧಿಕಾರದಲ್ಲಿ ಉಳಿಯುವುದರಲ್ಲಿ ಮಾತ್ರ ಆಸಕ್ತಿ ಹೊಂದಿದೆ. ಅವರು ಶ್ರೀಮಂತ ವ್ಯಕ್ತಿಗಳ ಕೈಗೊಂಬೆಯಾಗಿರುವುದನ್ನು ತೋರಿಸಲು ಪುರಾವೆ ಇದೆ. ಆದರೆ ಈ ನಿರ್ಲಕ್ಷ್ಯವು ಕಾಂಗ್ರೆಸ್ಸಿಗೆ ನಾಶದ ದಿನಗಳೆಂಬುದನ್ನು ರುಜುವಾತುಪಡಿಸುತ್ತದೆ. ಶೇಕಡ ತೊಂಬತ್ತರಷ್ಟು ಮಂದಿ ಅವರು ಲಿಂಗಾಯಿತರಾಗಿರಲಿ, ಹರಿಜನರಾಗಿರಲಿ ಅಥವಾ ಒಕ್ಕಲಿಗರಾಗಿರಲಿ ಅವರು ಕಾಂಗ್ರೆಸ್ಸಿಗೆ

ವಿರೋಧವಾಗಿದ್ದಾರೆ, ಏಕೆಂದರೆ, ಪಕ್ಷವು ಭೂಸುಧಾರಣೆಗಳನ್ನು ಅನುಷ್ಠಾನಕ್ಕೆ ತರಲು ಉತ್ಸುಕವಾಗಿಲ್ಲ ಎಂಬುದು ಕಾರಣ. ನಾನು ಏನೇ ಹೇಳಿದರೂ ಅಥವಾ ಯಾರೊಬ್ಬರು ಏನೇ ಹೇಳಿದರೂ ಅದು ಅಧಿಕಾರದ ಮದದ ಕಾಂಗ್ರೆಸ್ ಮಂದಿಯ ತಲೆಗೆ ಹೋಗುವುದಿಲ್ಲವೆಂಬುದು ನನಗೆ ಗೊತ್ತು. ಆದರೆ, ನಮಗೆ ಅವರ ಆಲೋಚನೆಗಳು ಗೊತ್ತಿರುವುದೆಂಬುದನ್ನು ಅವರು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಲಿ.

ನನ್ನ ಮಾತನ್ನು ಮುಕ್ತಾಯಗೊಳಿಸುತ್ತಾ, ಕ್ಯಾಲಿಫೋರ್ನಿಯಾ ವಿಶ್ವವಿದ್ಯಾನಿಲಯದ ಪ್ರೊಫೆಸರ್ ಕ್ರಿಶ್ಚಿಯನ್ ಬೇ ಅವರು ಅವರ "ಪ್ರಜಾಪ್ರಭುತ್ವದ ರಚನೆ" ಎಂಬ ಅವರ ಒಂದು ಗ್ರಂಥದಲ್ಲಿ ಹೇಳಿರುವುದನ್ನು ಸದನಕ್ಕೆ ಉಲ್ಲೇಖಿಸುತ್ತೇನೆ.

"ಅಲ್ಪಸಂಖ್ಯಾತರ ಹಿತಾಸಕ್ತಿಗಳನ್ನು ನ್ಯಾಯಬಾಹಿರವಾಗಿ ಬಲಿಕೊಡಲಾಗಿದೆಯೆ ಅಥವಾ ಇಲ್ಲವೆ, ಎಂಬುದನ್ನು ತೀರ್ಮಾನಿಸಲು ಬಹುಸಂಖ್ಯಾತರಿಗೆ ಅಧಿಕಾರವಿರಬಾರದು."

ಅಲ್ಪಸಂಖ್ಯಾತರನ್ನು ನ್ಯಾಯಯುತವಾಗಿ ಪರಿಗಣಿಸಲಾಗಿದೆಯೆ ಅಥವಾ ಇಲ್ಲವೆ, ಎಂಬುದನ್ನು ತೀರ್ಮಾನಿಸುವುದು ಬಹುಸಂಖ್ಯಾತರಲ್ಲ, ಹಿಂಸೆ ಅಥವಾ ಅನ್ಯಾಯ ಎಲ್ಲಿದೆ ಎಂಬುದು ಅಲ್ಪಸಂಖ್ಯಾತರಿಗೆ ತಿಳಿದಿರುತ್ತದೆ.

ಭಾರತದಲ್ಲಿ ಅನೇಕ ಸಮುದಾಯಗಳಿವೆ. ಭಾರತದಲ್ಲಿ ಸಮುದಾಯಗಳಿಲ್ಲವೇ ಇಲ್ಲವೆಂದು ಹೇಳಲಾಗುವುದಿಲ್ಲ. ಈ ಸಮುದಾಯಗಳನ್ನು ಒಗ್ಗೂಡಿಸಲು ಆಡಳಿತ ಪಕ್ಷವು, ಏನನ್ನು ಮಾಡಿದೆ? ಪ್ರತಿಯೊಂದು ಸಮುದಾಯವೂ ಸರ್ಕಾರಿ ಸೇವೆಗಳಲ್ಲಿ ಆಡಳಿತದಲ್ಲಿ, ರಾಜಕೀಯ ಹಾಗೂ ಪ್ರತಿಯೊಂದು ಕ್ಷೇತ್ರದಲ್ಲಿ ನಿರ್ದಿಷ್ಟವಾಗಿ ವಿಧಾನಮಂಡಲದಲ್ಲಿ, ಪ್ರತಿಯೊಂದು ಸಮುದಾಯದ ಜನಸಂಖ್ಯೆಗೆ ಅನುಸಾರವಾಗಿ ಪ್ರಾತಿನಿಧ್ಯ ಪಡೆಯದ ಹೊರತು ದೇಶದ ಹಲವಾರು ಸಮಸ್ಯೆಗಳನ್ನು ನೀವು ಪರಿಹರಿಸಿಕೊಳ್ಳಲಾರಿರಿ. ಇಲ್ಲಿ ಪರಿಶಿಷ್ಟ ಜಾತಿಗಳು, ಮುಸ್ಲಿಮರು, ಕ್ರಿಶ್ಚಿಯನ್ನರು, ಪಾರ್ಸಿಗಳು ಇದ್ದಾರೆ ಮತ್ತು ಬ್ರಾಹ್ಮಣರೂ ಇದ್ದಾರೆ. ಈ ಎಲ್ಲ ಸಮುದಾಯಗಳೂ ಅದರ ಜನಸಂಖ್ಯೆಗನುಗುಣವಾಗಿ ಅವರು, ಪ್ರಾತಿನಿಧ್ಯವನ್ನು ಹೊಂದಬೇಕು. ಈ ತತ್ವವನ್ನು ಒಪ್ಪಿಕೊಂಡು ಅನುಷ್ಠಾನಗೊಳಿಸದ ಹೊರತು, ನೀವು ದೇಶಸೇವೆ ಮಾಡಲಾರಿರಿ ಎಂದು ಭಾವಿಸುತ್ತೇನೆ. ನಾವು, ಅಲ್ಪಸಂಖ್ಯಾತರು, ಪ್ರಜಾಪ್ರಭುತ್ವದ ಹೆಸರಿನಲ್ಲಿ ಯಾವುದೇ ವರ್ಗದ ಜನರು ಮೇಲುಗೈ ಸಾಧಿಸುವುದನ್ನು ಇಷ್ಟಪಡುವುದಿಲ್ಲ. ಧನ್ಯವಾದಗಳು.

# ಮಾರುತಿರಾವ್ ಡಿ. ಮಾಲೆ

ಎಂ.ಎಲ್.ಸಿ. ಗುಲಬರ್ಗಾ

ಬಿ. ಶ್ಯಾಮಸುಂದರ ಅವರು ತುಂಬಾ ಸರಳ ಜೀವಿಯಾಗಿದ್ದರು. ವಿಶ್ವವಿಖ್ಯಾತರಾಗಿದ್ದು, ಅನೇಕ ಭಾಷೆಗಳಲ್ಲಿ ಪಾಂಡಿತ್ಯ ಹೊಂದಿದ್ದರು. ದಲಿತರ ಹಾಗೂ ಇತರ ಹಿಂದುಳಿದವರ ಬಗ್ಗೆ ಅತೀವ ಕಾಳಜಿ ಹೊಂದಿರುವವರಾಗಿದ್ದರು. ವಿದ್ವಾಂಸರು, ಲೇಖಕರು ಹಾಗೂ ಒಳ್ಳೆಯ ಭಾಷಣಕಾರರೂ ಆಗಿದ್ದರು. ಇವರ ಭಾಷಣ ಕೇಳಲು ಜನ ದೂರದೂರದಿಂದ ಕಾಲುನಡಿಗೆಯಿಂದ ಬರುತ್ತಿದ್ದರು. ಇವರ ಭಾಷಣದಿಂದ ಯುವಕರಲ್ಲಿ ಕಿಚ್ಚು ಹತ್ತುತ್ತಿತ್ತು.

ಇಷ್ಟೊಂದು ಬಹು ಆಯಾಮಿ ವ್ಯಕ್ತಿತ್ವ ಹೊಂದಿರುವ ಬಿ. ಶ್ಯಾಮಸುಂದರ ಅವರು ಸಮಾಜ ಸೇವೆಗೋಸ್ಕರ, ದೀನ ದಲಿತರಲ್ಲಿ ಜಾಗೃತಿ ತರುವ ಸಲುವಾಗಿ ಇಡೀ ಜೀವನ ಬ್ರಹ್ಮಚಾರಿಯಾಗಿ ಉಳಿದಿದ್ದರು.

ಭೀಮಸೇನಾ ಸಂಘಟನೆ ಸ್ಥಾಪಿಸಿ ಅದರ ಮುಖಾಂತರ ಸಮಾಜದಲ್ಲಿ ವ್ಯಾಪಿಸಿರುವ ಅಂಧವಿಶ್ವಾಸ ಹೋಗಲಾಡಿಸಿ ಸ್ವಾಭಿಮಾನದ ಬದುಕಿಗಾಗಿ ಒಂದು ದಿಶೆ ನೀಡಿದರು.

ಬಿ. ಶ್ಯಾಮಸುಂದರ ಅವರಂತಹ ಮಹಾನ್ ನಾಯಕರ ಬದುಕು ಬರಹ ಮತ್ತು ಹೋರಾಟ ಈ ನಾಡಿನ ದಲಿತರಿಗೆ ಇಂದಿಗೂ ಪ್ರಸ್ತುತವಾಗಿದೆ.

ಬಿ. ಶ್ಯಾಮಸುಂದರ ಅವರ ಬಗ್ಗೆ ಕರ್ನಾಟಕ ಸರಕಾರ ಹೊರ ತರುತ್ತಿರುವ ಈ ಗ್ರಂಥ ನಿಜವಾಗಿಯೂ ಒಂದು ಸಾರ್ಥಕ ಪ್ರಯತ್ನವಾಗಿದೆ ಶ್ಲಾಘನೀಯವಾಗಿದೆ.

# ಭೀಮಣ್ಣ ಖಂಡ್ರೆ

## ಮಾಜಿ ಸಚಿವರು, ಭಾಲ್ಕಿ

ಬಿ. ಶ್ಯಾಮಸುಂದರ ಅವರು ಒಬ್ಬ ನಿರ್ಭಯ ಕ್ರಾಂತಿಕಾರಿಯಾಗಿದ್ದರು. ದೀನ-ದಲಿತ-ದುರ್ಬಲರ ಬಗ್ಗೆ ಆತಿ ಸಂವೇದನಶೀಲ ಹೋರಾಟಗಾರರು ಆಗಿದ್ದರು. ಆದ್ದರಿಂದಲೇ ಅವರಿಗೆ ಪಸ್ತ್-ಕೌಮ್ ಲೀಡರ್ ಅಂದರೆ ತುಳಿತಕ್ಕೆ ಒಳಗಾದ ಜನಾಂಗದ ನಾಯಕ ಎಂದು ಕರೆಯಲಾಗುತ್ತಿತ್ತು.

ನನಗೆ ಚೆನ್ನಾಗಿ ನೆನಪಿದೆ. ದಲಿತರ, ದುರ್ಬಲರ ಬಗ್ಗೆ ಅವರ ಕಾಳಜಿ ಹಾಗೂ ಅವರ ಕ್ರಾಂತಿಕಾರಿ ಭಾಷಣದಿಂದ ಉದಗಿರನಲ್ಲಿ ಮೇಲ್ವರ್ಗದ ಜನ ಪ್ರತಿಭಟಿಸಿದ್ದರು. ಆದರೆ ಶ್ಯಾಮಸುಂದರ್ ಸಾಬ್ ತನ್ನ ನೀತಿಯಿಂದ ಹಿಂಜರಿಯಲಿಲ್ಲ. ಅವರ ಸಭೆ ನಡೆಯದಂತಾಗಿತ್ತು. ಆದರೆ ಮಾರನೆ ದಿನ ಪೊಲೀಸರ ಬಿಗಿ ಬಂದೋಬಸ್ತಿನಲ್ಲಿ ಅವರು ತನ್ನ ಕ್ರಾಂತಿಕಾರಿ ಭಾಷಣ ಮಾಡಿ ದಲಿತರಲ್ಲಿ ಸ್ವಾಭಿಮಾನ ತುಂಬುವಲ್ಲಿ ಯಶಸ್ವಿಯಾಗಿದ್ದರು.

ಸಮಾಜ ವ್ಯವಸ್ಥೆ ಬದಲಾಗಬೇಕು ಎಂದು ಕೊನೆಯತನಕ ಹೋರಾಡಿರುವ ಧೀರ ನಾಯಕರು ಅವರಾಗಿದ್ದರು.

ಭಾಲ್ಕಿ ಅಂದು ಜಂಟಿ ಮತಕ್ಷೇತ್ರವಾಗಿತ್ತು. ನಾನು ಜನರಲ್ ಸೀಟ್‌ನಿಂದ ಹಾಗೂ ಶ್ಯಾಮಸುಂದರ್ ಅವರು ರಿಜರ್ವ್ ಸೀಟಿನಿಂದ ಮೈಸೂರು ವಿಧಾನಸಭೆಗೆ ಆಯ್ಕೆ ಆಗಿದ್ದೇವು. ವಿಧಾನಸಭೆಯಲ್ಲಿ ಕೂಡಾ ಶ್ಯಾಮಸುಂದರ್ ಅವರು ತುಂಬಾ ಸಕ್ರೀವಾಗಿ ಭಾಗವಹಿಸುತ್ತಿದ್ದರು. ಬಜಟ್ ಮನೆಯ ಸಂದರ್ಭವಿರಲಿ ಅಥವಾ ಯಾವುದೇ ಮಸೂದೆ ಮಂಡನೆಯ ಸಂದರ್ಭವೇ ಆಗಿರಲಿ ಬಿ. ಶ್ಯಾಮಸುಂದರ್ ಅವರು ಆಯಾ ವಿಷಯಗಳಲ್ಲಿ ಒಬ್ಬ ವಿಶೇಷಜ್ಞರಂತೆ ವಿಷಯ ಮಂಡಿಸುತ್ತಿದ್ದರು.

# ಎಚ್.ಎಸ್. ಶ್ರೇಯಸ್ಕರ್

ಭೀಮಸೇನೆಯ ಸಂಸ್ಥಾಪಕ ಸದಸ್ಯರು, ಗುಲಬರ್ಗಾ

1952ರಲ್ಲಿ ಶ್ಯಾಮಸುಂರ್ ಸಾಹೇಬರು ಮೊದಲನೆ ಸಲ ಗುಲಬರ್ಗಾಗೆ ಬಂದಿದ್ದರು. ಅವರ ಭಾಷಣ ಕೇಳಿ ಪ್ರಭಾವಿತರಾದವರ ಪೈಕಿ ನಾನೂ ಒಬ್ಬ. ಅನ್ಯಾಯದ ವಿರುದ್ಧ ಹೋರಾಡಿ, ಸ್ವಾಭಿಮಾನದ ಬದುಕು ಸಾಗಿಸಲು ದಲಿತರಲ್ಲಿ ಕಿಚ್ಚು ಹಚ್ಚಿದವರು. ಸವರ್ಣೀಯರ ಓಣಿಯಲ್ಲಿ ದಲಿತರು ಹೋಗುತ್ತಿರುವಾಗ ಕಾಲಲ್ಲಿ ಚಪ್ಪಲ್ಲಿ ಹಾಕಬಾರದು ಎಂಬ ಪ್ರತೀತಿ ಇತ್ತು. ಅದೇ ರೀತಿ ದಲಿತ ಯುವಕರು ಮೀಸೆ ಇಡಬಾರದು ಎಂಬ ರೂಢಿ ಇತ್ತು. ಇದನ್ನು ಶ್ಯಾಮಸುಂದರ್ ಸಾಹೇಬರು ತೀವ್ರವಾಗಿ ಪ್ರತಿಭಟಿಸಿದ್ದರು. ದಲಿತ ಯುವಕರು ದೊಡ್ಡ ದೊಡ್ಡ ಮೀಸೆ ಬಿಡಬೇಕು. ಕೈಯಲ್ಲಿ ಲಾಠಿ ಹಿಡಿದು, ಕಾಲಿನಲ್ಲಿ ಚಪ್ಪಲಿ ತೊಟ್ಟು ಗ್ರಾಮದಲ್ಲಿ ಓಡಾಡಬೇಕು ಎಂದು ಹೋರಾಟ ಆರಂಭಿಸಿದರು.

ಬೀದರ್, ನಾಂದೇಡ ಮುಂತಾದ ಕಡೆಗಳಲ್ಲಿ ಸಾಹೇಬರ ಜೊತೆ ಪ್ರವಾಸ ಮಾಡುವ ಸದಾವಕಾಶ ನನಗೆ ಲಭಿಸಿತು. ದೈವ, ಮೂಢನಂಬಿಕೆ ಬಗ್ಗೆ ದಲಿತರು ವೈಜ್ಞಾನಿಕವಾಗಿ ಚಿಂತನೆ ಮಾಡಬೇಕು ಎಂದು ಅವರು ಹೇಳುತ್ತಿದ್ದರು.

ಬಿ. ಶ್ಯಾಮಸುಂದರ ಸಾಹೇಬರು ಪ್ರಕಾಂಡ ವಿದ್ವಾಂಸರು, ಕುಶಲ ಸಂಘಟಕರು, ಒಳ್ಳೆ ಭಾಷಣಕಾರರು ಆಗಿದ್ದರು. ಅವರಂತಹ ಅದ್ವಿತೀಯ ವ್ಯಕ್ತಿತ್ವದ ಜೊತೆ ಸಮಾಜ ಸೇವೆ ಮಾಡುವ ಅವಕಾಶ ನನಗೆ ಸಿಕ್ಕಿರುವುದರಿಂದ ನಾನು ಧನ್ಯವಾಗಿದ್ದೇನೆ.

# ಖುಷ್‌ವಂತ್ ಸಿಂಗ್

**21.12.1987**

"ಟೆಲಿಗ್ರಾಫ್" ಪತ್ರಿಕೆ ದಿನಾಂಕ 21.12.1987

ದಲಿತ ಧ್ವನಿ:

ಈ ದಿನ ಅವರೇನಾದರೂ ಬದುಕಿದಿದ್ದರೆ, ನಮ್ಮ ಲಕ್ಷಾಂತರ ದಲಿತ ಸಹೋದರರು, ಈ ವಾರದಲ್ಲಿ ಅವರ 80ನೇ ವರ್ಷದ ಹುಟ್ಟುಹಬ್ಬವನ್ನು ಆಚರಿಸುತ್ತಿದ್ದರು. ಅವರು ಕೇವಲ 12 ವರ್ಷಗಳ ಹಿಂದೆ ಮರಣಹೊಂದಿದ್ದಾರೆ. (ಅವರು 1975ರ ಮೇ 19ರಂದು ಹೈದರಾಬಾದಿನಲ್ಲಿ ಮರಣ ಹೊಂದಿದರು). ಆದರೆ, ದಲಿತ ಸಮುದಾಯದವರಲ್ಲದ ಕೆಲವು ಜನ ಅವರ ಹೆಸರನ್ನು ಅಥವಾ 1968ರಲ್ಲಿ ಅವರು ತಮ್ಮ ಭೀಮ ಸೇನಾದೊಂದಿಗೆ ಹಮ್ಮಿಕೊಂಡ ಸಾಮೂಹಿಕ ಆಂದೋಲನವನ್ನು ಪುನರ್‌ಸ್ಮರಣೆ ಮಾಡಿಕೊಳ್ಳುತ್ತಿದ್ದರು. ಅದು ಒಂದು ಕಾಲದಲ್ಲಿ ಎರಡು ಲಕ್ಷ ಸದಸ್ಯರಿಗೆ ತಿಂಗಳಿಗೆ ಹತ್ತು ಪೈಸೆ ಪಡೆಯುವ ಮೂಲಕ ಸದಸ್ಯತ್ವವನ್ನು ನೀಡಿ, ಮಹಾರಾಷ್ಟ್ರ, ಆಂಧ್ರ ಹಾಗೂ ಕರ್ನಾಟಕದಲ್ಲಿ ಎದುರಾಳಿ ಇಲ್ಲದ ಸಬಲ ಸಂಘಟನೆಯಾಗಿ ಬೆಳೆಯಿತು.

ಶ್ಯಾಮಸುಂದರ್, ಅವರು ಔರಂಗಾಬಾದಿನಲ್ಲಿ ಒಂದು ಪರಿಶಿಷ್ಟ ಜಾತಿಯ ಕುಟುಂಬದಲ್ಲಿ ಜನಿಸಿದರು. ಅವರ ತಂದೆ ಒಬ್ಬ ಮುಖ್ಯ ಪೇದೆ ಆಗಿದ್ದರು. ಅವರು ಉಸ್ಮಾನಿಯಾ ವಿಶ್ವವಿದ್ಯಾನಿಲಯದಿಂದ ಪದವೀಧರರಾದರು ಮತ್ತು ಕೆಲವು ಕಾಲ ಕಾನೂನು ವೃತ್ತಿ ನಡೆಸಿದರು. ನಂತರ ಅವರು ದಲಿತರೆಂದು ವಿವರಿಸುವ ಮೂಲ ಭಾರತೀಯರ, ಪೂರ್ವ ಸಂಗತಿಯನ್ನು ಸಮರ್ಥಿಸುವತ್ತ ತಿರುಗಿದರು. ಅವರು ಬಾಬಾ ಸಾಹೇಬರ ಹೆಸರಾದ ಭೀಮರಾವ್‌ರವರ ಹೆಸರಿನಲ್ಲಿ ಭೀಮಸೇನೆಯನ್ನು ಹಮ್ಮಿಕೊಂಡರು. ಡಾ|| ಅಂಬೇಡ್ಕರ್, ಶಾಂತಿ ಪ್ರಿಯರಾಗಿದ್ದು ಅವರು ಬೌದ್ಧ ಧರ್ಮವನ್ನು ಅವಲಂಬಿಸಿದರೆ, ಶ್ಯಾಮಸುಂದರ್ ಹಿಂಸಾತ್ಮಕ ಕ್ರಾಂತಿಯನ್ನು ನಂಬಿದರು ಮತ್ತು ನಾಸ್ತಿಕ ವಾದಿಯಾಗಿ ಹಿಂದೂಗಳ ಕಡು ವಿರೋಧಿಯಾದರು. ಅವರು, ತಮಿಳುನಾಡಿನ ಪೆರಿಯಾರ್ ರಾಮಸ್ವಾಮಿಯವರೊಂದಿಗೆ ಸ್ನೇಹ ಬೆಳೆಸಿ, ಅವರಂತೆ ವಿಗ್ರಹ ಭಂಜಕರಾಗಿ ದೇವ–ದೇವತೆಗಳ ಮೂರ್ತಿಗಳನ್ನು ಅಪವಿತ್ರಗೊಳಿಸಿದರು ಮತ್ತು ಪವಿತ್ರ ಗ್ರಂಥಗಳನ್ನು ಸುಟ್ಟರು. ಪೆರಿಯಾರ್‌ನಂತೆಯೇ ಅವರು ಮರಾಠಿ, ಉರ್ದು, ಹಿಂದಿ ಮತ್ತು ಇಂಗ್ಲೀಷ್ ಭಾಷೆಗಳ ಮೇಲೆ ಪ್ರಭುತ್ವ ಹೊಂದಿರುವುದರೊಂದಿಗೆ ತೀಕ್ಷ್ಣ ವಾಕ್ಚತುರರಾಗಿದ್ದರು. ಅವರು ಹೈದರಾಬಾದ್ ವಿಧಾನಸಭೆಯ ಉಪಸಭಾಧ್ಯಕ್ಷರು ಮತ್ತು ಕರ್ನಾಟಕ ವಿಧಾನಸಭೆಯಲ್ಲಿ ನಾಲ್ಕು ವರ್ಷಗಳಕಾಲ ಸದಸ್ಯರಾಗಿದ್ದರು. ಅವರು, ತಮ್ಮ ಅತಿರೇಕದ ಭಾಷಣದಿಂದಾಗಿ ಅನೇಕ ಬಾರಿ ಜೈಲಿಗೆ ಹೋಗಿದ್ದರು. ಅವರು ತಮ್ಮ 68ನೇ ವಯಸ್ಸಿನಲ್ಲಿ ಮರಣ ಹೊಂದಿದರು. ಅವರು ಬ್ರಹ್ಮಚಾರಿಯಾಗಿದ್ದು ಅವರಿಗೆ ಯಾವುದೇ ಸಂತಾನವಿರಲಿಲ್ಲ ಅಥವಾ ಒಂದು ಪೈಸೆಯ ಆಸ್ತಿಯೂ ಇರಲಿಲ್ಲ. ಅವರ ಪ್ರಧಾನ ಕೃತಿ "ಅವರು ಸುಡುತ್ತಾರೆ" ಎನ್ನುವ ಕೃತಿಯನ್ನು ಈಗ ಬೆಂಗಳೂರಿನ ದಲಿತ ಸಂಘದಿಂದ ಪ್ರಕಟಿಸಲಾಗುತ್ತಿದೆ. ಇಂದು ಭೀಮಸೇನ ಬಗ್ಗೆ ಈಗ ಸ್ವಲ್ಪವೇ ಉಳಿದಿದೆ. ಅದರ ನೆನಪನ್ನು ಶ್ಯಾಮಸುಂದರರ ಸಮಕಾಲೀನರಾದ ಲೆಫ್ಟಿನೆಂಟ್ ಹನುಮಪ್ಪ ಶ್ರೇಯಸ್ಕರ್‌ನಿಂದಾಗಿ ಜೀವಂತವಾಗಿಡಲಾಗಿದೆ.

# ಅತ್ಯುಪಚಾರ ಮಾಡುವವರ ವಿರುದ್ಧ ದಂಗೆ ಏಳುವುದು

ಸಿ. ರಾಜಗೋಪಾಲಾಚಾರಿ

ಸ್ವರಾಜ್ಯ 14.01.1961

ಮೈಸೂರು ವಿಧಾನಸಭೆಯ ಹರಿಜನ ಸದಸ್ಯ ಮತ್ತು ಅಖಿಲಭಾರತ ದಲಿತ ವರ್ಗಗಳ ಸಂಘದ ಅಧ್ಯಕ್ಷರಾದ ಶ್ರೀ ಶ್ಯಾಮಸುಂದರ್‌ರವರು ಅಪ್ರಿಯ ಸತ್ಯವನ್ನು ಧೈರ್ಯವಾಗಿ ವ್ಯಕ್ತಪಡಿಸುತ್ತಿದ್ದರು. ಅವರು, ಹೊಸ ವರ್ಷದ ಮೊದಲ ಕೆಲಸದ ದಿನದಂದು ಕಾಂಗ್ರೆಸ್ ಸರ್ಕಾರಗಳು ಅನುಸರಿಸುತ್ತಿರುವ ಕೋಮುನೀತಿಯು, "ಪ್ರತಿಭಾವಂತರ ಮತ್ತು ಬುದ್ಧಿವಂತರನ್ನು ಶೈಕ್ಷಣಿಕ ಸಂಸ್ಥೆಗಳಿಂದ ಮತ್ತು ಆಡಳಿತದಿಂದ ಗಡಿಪಾರು ಮಾಡುವಿಕೆ"ಯಲ್ಲಿ ಪರಿವರ್ತಿತವಾಗುತ್ತಿದೆ ಎಂದು ಆರೋಪಿಸಿದರು. ಪರಿಶಿಷ್ಟ ಜಾತಿಗಳು ಮತ್ತು ಹಿಂದುಳಿದ ವರ್ಗಗಳೆಂದು ಕರೆಯುವವರ ಹೆಸರಿನಲ್ಲಿ, ಕಾಂಗ್ರೆಸ್ ಸರ್ಕಾರವು, ನಿಜವಾಗಿ ಬುದ್ಧಿವಂತರಾದವರನ್ನು ಆಡಳಿತದಿಂದ "ನಿರ್ನಾಮ ಮಾಡುತ್ತಿದೆ" ಮತ್ತು ಅಧಿಕಾರದಲ್ಲಿರುವವರು, ತಾವು ಕುರ್ಚಿಗೆ ಅಂಟಿಕೊಂಡು ಕೂರಲು ಅನುಕೂಲವಾಗುವಂತೆ ಒಂದು ಕೋಮನ್ನು ಇನ್ನೊಂದು ಕೋಮಿನ ವಿರುದ್ಧ ಎತ್ತಿಕಟ್ಟುತ್ತಿದ್ದಾರೆ ಎಂದು ಅವರು ಹೇಳಿದರು. ಇದು ನಿಜವಾಗಿಯೂ ಬುದ್ಧಿವಂತಿಕೆಯ ಹೊಸ ಶಕೆಯ ಅಸ್ತಮಾನ ಹಾಗೂ ತೀವ್ರವಾಗಿ ನಂಬಿಕೆದ್ರೋಹ ಮಾಡಿ ತಪ್ಪುದಾರಿಗೆಳೆಯುತ್ತಿರುವುದಕ್ಕೆ ಕಾರಣವಾಗಿವೆ. ಈ ಹೊಸದಾಗಿ ಕಂಡುಬಂದಿರುವ ಸತ್ಯವು, ಕುರುಡು ಪ್ರಭಾವ ಹಾಗೂ ಕೋಪಕ್ಕೆ ಬಲಿಪಶುವಾಗುವುದಿಲ್ಲವೆಂಬುದಾಗಿ ನಾವು ಭಾವಿಸೋಣ ಹಾಗೂ ನಂಬೋಣ. ಹಿಂದುಳಿದ ವರ್ಗಗಳನ್ನು ತೃಪ್ತಿಪಡಿಸುವ ರಿಯಾಯಿತಿಗಳನ್ನು ಅವರು ಯಾವಾಗಲೂ ಕೆಳಗಿನ ಸ್ಥಿತಿಗಳಲ್ಲಿರುವಂತೆ ಇಡಲು ಮತ್ತು ಅದರಿಂದ, ಅವರನ್ನು ಶಿಬಿರ ಅನುಯಾಯಿಗಳಂತೆ ನಡೆಸಿಕೊಳ್ಳುವುದನ್ನು ಮುಂದುವರಿಸಬಹುದು ಹಾಗೂ ಆಡಳಿತ ಪಕ್ಷವನ್ನು ಸಾರ್ವಕಾಲಿಕ ಕಚೇರಿಯಲ್ಲಿಡಬಹುದು ಎನ್ನುವ ರೀತಿಯಲ್ಲಿ ಲೆಕ್ಕಹಾಕಲಾಗುತ್ತದೆ. ಈ ವರ್ಗಗಳು ಈ ಕಡೆಗಣಿಸುವಿಕೆ, ಶೋಷಣೆ ಕಾರ್ಯಕ್ರಮದ ವಿರುದ್ಧ ದಂಗೆ ಏಳುವ ಕಾಲ ಇದಾಗಿದೆ. ಡಾ॥ ಅಂಬೇಡ್ಕರ್ ಆ ರಿಯಾಯಿತಿಗಳಿಗೆ ಕಾಲಮಿತಿಯನ್ನು ಒಪ್ಪಿಕೊಂಡಾಗ ಅವರ ಮನಸ್ಸಿನಲ್ಲಿ ಈ ಕೆಟ್ಟ ಯೋಚನೆ ಇತ್ತು. ಶ್ಯಾಮಸುಂದರ್ ಎತ್ತಿರುವ ಈ ದಂಗೆಯ ಚಿಹ್ನೆಗಿಂತ ಹೆಚ್ಚಿಗೆ ಯಾವುದೂ ಅವರ ಉತ್ಸಾಹವನ್ನು ಸರಿಗಟ್ಟುವುದಿಲ್ಲ.






1969ರಲ್ಲಿ ಲಖನವ್‌ನಲ್ಲಿ ಏರ್ಪಡಿಸಲಾಗಿದ ಅಖಿಲ ಭಾರತ ಬ್ಯಾಕವರ್ಡ್ ಕ್ಲಾಸಸ್ ಸಮ್ಮೇಳನ.
ಬಿ. ಶ್ಯಾಮಸುಂದರ್ ಅವರ ಅಧ್ಯಕ್ಷತೆಯಲ್ಲಿ ಜರುಗಿತು. ಈ. ವಿ. ರಾಮಸ್ವಾಮಿ ನಾಯಕರ್,
ಶಾಂತೆ ಭದತ್ ಆನಂದ ಕೌಶಲ್ಯ ಮತ್ತು ಡಾ. ಫರೀದ್ ಈ ಸಮ್ಮೇಳನದಲ್ಲಿ ಭಾಗವಹಿಸಿದ್ದರು



1955ರಲ್ಲಿಯೇ ಗುಲಬರ್ಗಾನಲ್ಲಿ ಬಿ. ಶ್ಯಾಮಸುಂದರ್ ಅವರ ಹೆಸರಿನಲ್ಲಿ ರಸ್ತೆಯೊಂದರ ಉದ್ಘಾಟನೆ.





“ ದಿ ಟೈಲಿಗ್ರಾಫ್ ” ಖ್ಯಾತ ಆಂಗ್ಲ ಪತ್ರಿಕೆಯಲ್ಲಿ ಖ್ಯಾತ ಅಂಕಣಕಾರರಾದ ಖುಶುವಂತ್ ಸಿಂಗ್ ಅವರು ಬಿ. ಶ್ಯಾಮಸುಂದರ್ ಅವರನ್ನು ಕುರಿತು ಒಂದು ವಿಶೇಷ ಲೇಖನ ಬರೆದಿದ್ದರು. ಅದು 12-12-1987ರಂದಿನ ಸಂಚಿಕೆಯಲ್ಲಿ ಪ್ರಕಟಗೊಂಡಿತು. ಅದರಲ್ಲಿ ನಾದೇಂಡ್‌ನಲ್ಲಿ ಸರದಾರ ತಾರಾಸಿಂಗ್ ಅವರ ಜೊತೆ ಶ್ಯಾಮಸುಂದರ್ ಅವರ ಭೇಟಿ 1965ರಲ್ಲಿ ಪ್ರಕಟಿಸಲಾಗಿತ್ತು.



29-04-1964 ರಂದು “ ಭೀಮ ಸೇನಾ ” ಸಂಘಟನೆ ಅಸ್ತಿತ್ವಕ್ಕೆ ಬಂದಿತು. ಆ ಸಂದರ್ಭದಲ್ಲಿ ಗುಲಬರ್ಗಾದಲ್ಲಿ ಎಚ್. ಎಸ್. ಶ್ರೇಯಸ್ಕರ್ ಅವರು ಮೌಥ್ ಆರ್ಗನ್ ನುಡಿಸಿದ್ದರು. ಭೀಮರಾವ್ ಭಾರತಿ ಅವರು ಸಹ ಭಾಗವಹಿಸಿದ್ದರು.





ಮೈಸೂರು ವಿಧಾನ ಸಭೆ ( ಇಂದಿನ ಕರ್ನಾಟಕ ವಿಧಾನ ಸಭೆ) ಯ ಸದಸ್ಯರಾಗಿ 1957-62ರಲ್ಲಿ ಸೇವೆ, ಸಭಾಂಗಣದಲ್ಲಿ ಅವರ ಸಮಕಾಲಿನ ಮುಖಂಡರ ಜೊತೆ ಬಿ. ಶ್ಯಾಮಸುಂದರ್ ಅವರನ್ನು ಚಿತ್ರದಲ್ಲಿ ನೋಡಬಹುದಾಗಿದೆ.
( ನಿಂತು ಮಾತನಾಡುತ್ತಿರುವವರೇ ಬಿ. ಶ್ಯಾಮಸುಂದರ್)



1978ರಲ್ಲಿ ಡಾ. ಬಾಬಾಸಾಹೇಬ್ ಪುಣ್ಯತಿಥಿ ಸಮಾರಂಭದಲ್ಲಿ ಬಿ. ಶ್ಯಾಮಸುಂದರ್ ಅವರು ಮುಖ್ಯ ಅತಿಥಿಗಳಾಗಿ ಹಾಗೂ ವಾಯಿ. ದಾಸಯ್ಯ ಮೂಲಭಾರತಿ ಪ್ರಕಾಶ, ಡೇವಿಡ್ ಸಿಮಿಯೊನ್ ಮತ್ತು ಎಂ. ಎ. ಕಾಜಮಿ ಉಪಸ್ಥಿತರಿದ್ದರು.





1946-47 ಪ್ಯಾರಿಸ್‌ನಲ್ಲಿ ಯುನೈಟೆಡ್ ನೇಶನ್ಸ್ ಸೆಕ್ಯುರಿಟಿ ಕೌನ್ಸಿಲ್‌ನಲ್ಲಿ ಹೈದರಾಬಾದದಿಂದ ತೆರಳಿದ ಪ್ರತಿನಿಧಿ ಮಂಡಳದಲ್ಲಿ ಬಿ. ಶ್ಯಾಮ ಸುಂದರ್ ಅವರು ಸದಸ್ಯರಾಗಿದ್ದರು. ಈ ಪ್ರವಾಸದಲ್ಲಿ ಅವರು ಚೀನಾ ನಾಯಕರಾದ ಚಾವು-ಇನ್-ಲಾಯಿ ಮತ್ತು ಹೋಚಿಮನ್ ಅವರೊಂದಿಗೆ ಭೇಟಿ ಆಗಿದ್ದರು. ಪ್ರತಿನಿಧಿ ಮಂಡಳದ ಈ ಚಿತ್ರದಲ್ಲಿ ಬಿ. ಶ್ಯಾಮಸುಂದರ್ ಅವರು ಮಧ್ಯದಲ್ಲಿ ನಿಂತಿರುವುದು ನೋಡಬಹುದಾಗಿದೆ.



1962ರಲ್ಲಿ ಲಾಲ್ ಬಹುದ್ದೂರ್ ಶಾಸ್ತ್ರಿ ಅವರು ದೇಶದ ಪ್ರಧಾನಿ ಆದ ಬಳಿಕ ಅವರನ್ನು ದಿಲ್ಲಿಯಲ್ಲಿ ಬಿ. ಶ್ಯಾಮ ಸುಂದರ್ ಅವರು ಹೂಮಾಲೆ ಹಾಕಿ ಅಭಿನಂದಿಸಿದರು





1973ರಲ್ಲಿ ಬೆಂಗಳೂರಿನಲ್ಲಿ ಏರ್ಪಡಿಸಲಾಗಿರುವ ರೆಶನಲಿಸ್ಟ್ ಸಮಾವೇಶದಲ್ಲಿ
ಬಿ. ಶ್ಯಾಮಸುಂದರ್ ಅವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದರು.
ಸಭೆಯ ಅಧ್ಯಕ್ಷತೆಯನ್ನು ಈ. ವಿ. ರಾಮಸ್ವಾಮಿ ನಾಯಕರ್ ಅವರು ವಹಿಸಿದ್ದರು.



# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20.00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15.00 |
| 3. | ಶಾಂತವೇರಿ ಗೋಪಾಲ ಗೌಡ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ | 15.00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20.00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20.00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15.00 |
| 7. | ಜಿ.ವಿ. ಹಳ್ಳಿಕೇರಿ | ಡಾ॥ ಆರ್.ಎಂ.ಎಲ್. ಪಾಟೀಲ್ | 15.00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15.00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15.00 |
| 10. | ಕೆ.ಟಿ. ಭಾಷ್ಯಂ | ಡಾ॥ ವಿಘ್ನೇಶ್ ಎನ್. ಭಟ್ | 15.00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15.00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20.00 |
| 13. | ಜಗಳೂರು ಇಮಾಂ | ಜಿ.ಎಸ್. ಸದಾನಂದ | 15.00 |
| 14. | ಕೆ.ಸಿ. ರೆಡ್ಡಿ | ಡಾ॥ ಸಂಧ್ಯಾರೆಡ್ಡಿ | 20.00 |
| 15. | ಬಿ.ಪಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20.00 |

| | | | |
|---|---|---|---|
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ|| ಬಿ.ಎನ್. ಚಂದ್ರಯ್ಯ | 20.00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20.00 |
| 18. | ಎಂ. ನಾಗಪ್ಪ | ಡಾ|| ಎಂ.ಎಸ್. ಪಾಟೀಲ್ | 15.00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ|| ಹೆಚ್.ಎಂ. ಪಂಚಾಕ್ಷರಯ್ಯ | 15.00 |
| 20. | ಗಂಗಾಧರ್ ನಮೋಶಿ | ಡಾ|| ಕವಂಟೆ ಹಾಗೂ ಇತರರು | 15.00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15.00 |
| 22. | ಆರ್. ಗುಂಡೂರಾವ್ | ಈಶ್ವರ ದೈ ತೋಟ | 20.00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15.00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15.00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15.00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30.00 |
| 27. | ಬಿ.ಎಲ್. ಸುಬ್ಬಮ್ಮ | ಡಾ|| ಡಿ.ಎಸ್. ಜಯಪ್ಪಗೌಡ | 15.00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20.00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವರ್ಣೇಕರ್ | 20.00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಉಷಾ ಹಾರೋಗದ್ದೆನಾಯಕ್ | 20.00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30.00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15.00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20.00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25.00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30.00 |
| 36. | ಎಸ್.ಸಿ. ಮಲ್ಲಯ್ಯ | ಡಾ|| ಟಿ.ಸಿ. ಪೂರ್ಣಿಮ | 20.00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30.00 |

| | | | |
|---|---|---|---|
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30.00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20.00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20.00 |
| 41. | ಎಂ.ವಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15.00 |
| 42. | ಕೆ.ಎಚ್. ರಂಗನಾಥ್ | ಎಲ್.ಎನ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ॥ ಎಚ್. ನರಸಿಂಹಯ್ಯ | ಪ್ರೊ. ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |
| 50. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–2 | ಡಾ. ಎಂ.ಜಿ. ನಾಗರಾಜ್ | |

## ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ|| ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20.00 |
| 2. | ಡಾ|| ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15.00 |
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20.00 |
| 4. | ಡಾ|| ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20.00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15.00 |
| 6. | ಡಾ|| ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20.00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20.00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15.00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20.00 |
| 10. | ಡಾ|| ಚಿಂತಾಮನ್ ಡಿ. ದೇಶಮುಖ್ | ಬೇಳೂರು ಸುದರ್ಶನ್ | 20.00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶಕನಾಲಯ | 15.00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15.00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15.00 |
| 14. | ಡಾ|| ಲಂಕಾ ಸುಂದರಂ | ಜವರಯ್ಯ | 15.00 |

